CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೧೬, ೨೦೦೫ (ಜೇಷ್ಠ ೨೬, ಶಕ ವರ್ಷ ೧೯೨೭) | ಸಂಚಿಕೆ ೨೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ**

**ಸಂಖ್ಯೆ: ಎಲ್‌ಆರ್‌ಎಫ್:ಸಿಆರ್:12/2005-06 ದಿನಾಂಕ: 12ನೇ ಮೇ 2005**

**ವಿಷಯ :** ಸಿ.ಎಂ.ಆರ್. ಜ್ಞಾನಾಧಾರ ಟ್ರಸ್ಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿಬೆಳ್ಳಂಡೂರು ಖಾನೆ ಗ್ರಾಮದ ಸ.ನಂ. 197 ರಲ್ಲಿ 0-32$^1/_2$, 189 ರಲ್ಲಿ 2-39, 190 ರಲ್ಲಿ 2-06 ಒಟ್ಟು 5-37$^1/_2$, ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸಿ.ಎಂ.ಆರ್. ಜ್ಞಾನಾಧಾರ ಟ್ರಸ್ಟ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿಬೆಳ್ಳಂಡೂರು ಖಾನೆ ಗ್ರಾಮದ ಸ.ನಂ. 197, 189 ಮತ್ತು 190 ರಲ್ಲಿ ಒಟ್ಟು 5-37$^1/_2$ ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: ಸಿಆರ್: 53/05-06 ದಿನಾಂಕ: 6.5.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 197, 189 ಮತ್ತು 190 ರಲ್ಲಿ ಒಟ್ಟು 5-37$^1/_2$ ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I) (II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ ಶಿವಾಜಿನಗರ, ಉಪ ನೊಂದಣಾ ಕಛೇರಿಯಲ್ಲಿ ದಿನಾಂಕ: 17.02.1995 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ಪೂರ್ವ ವರ್ತೂರು ಹೋಬಳಿ, ಅಮಾನಿಬೆಳ್ಳಂಡೂರು ಖಾನೆ ಗ್ರಾಮದ ಸ.ನಂ. 197 ರಲ್ಲಿ 0-32 $^1/_2$ 189 ರಲ್ಲಿ 2-39, 190ರಲ್ಲಿ 2-06 ಒಟ್ಟು 5-37$^1/_2$ ಎಕರೆ:ಗುಂಟೆ ಜಮೀನನ್ನು ಸಿ.ಎಂ.ಆರ್. ಜ್ಞಾನಾಧಾರ ಟ್ರಸ್ಟ್, ನಂ. 2079, 2ನೇ ಮುಖ್ಯರಸ್ತೆ, 3ನೇ ಬ್ಲಾಕ್, 3ನೇ ಹಂತ, ಹೆಚ್.ಬಿ.ಆರ್. ಲೇಔಟ್ ಬೆಂಗಳೂರು-84 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I) (II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.03 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ. 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಸದರಿ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ.

ಪಿ.ಆರ್.798

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಸೂಚನೆ

## ಸಂಖ್ಯೆ: ಎಲ್ಆರ್ಎಫ್:ಸಿಆರ್:104/2004-05 ದಿನಾಂಕ: 5ನೇ ಮೇ 2005

**ವಿಷಯ :** ಐ.ಎನ್.ವೈ.ಎಸ್. ಮೆಡಿಕಲ್ ರೀಸರ್ಚ್ ಸೊಸೈಟಿ ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸ.ನಂ. 99/1 ರಲ್ಲಿ 4-13 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಐ.ಎನ್.ವೈ.ಎಸ್. ಮೆಡಿಕಲ್ ರೀಸರ್ಚ್ ಸೊಸೈಟಿ ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸ.ನಂ. 99/1 ರಲ್ಲಿ 4-13 ಎಕರೆ:ಗುಂಟೆ ಜಮೀನನ್ನು ತೋಟಗಾರಿಕೆ ಪುಷ್ಪೋದ್ಯಮ ಮತ್ತು ಸಾವಯವ ಕೃಷಿಯ ಮೂಲಕ ತರಕಾರಿ ಬೆಳೆಯುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್.ಎಫ್ (1) ಸಿಆರ್:114/04-05 ದಿನಾಂಕ: 15.03.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 99/1 ರಲ್ಲಿ 4-13 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I) (II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೊಂದಣಾಧಿಕಾರಿಗಳು ಜಿಲ್ಲಾ ಸಂಘಗಳ ವಿಲೇಖನಾಧಿಕಾರಿಯವರ ನೊಂದಣಿ ಕಛೇರಿ, ಬೆಂಗಳೂರಿನಲ್ಲಿ ದಿನಾಂಕ: 3.2.1984 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ತೋಟಗಾರಿಕೆ ಪುಷ್ಪೋದ್ಯಮ ಮತ್ತು ಸಾವಯವ ಕೃಷಿಯ ಉದ್ದೇಶಕ್ಕೆ 10 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸ.ನಂ.99/1 ರಲ್ಲಿ 4-13 ಎಕರೆ:ಗುಂಟೆ ಜಮೀನನ್ನು ಐ.ಎನ್.ವೈ.ಎಸ್. ಮೆಡಿಕಲ್ ರೀಸರ್ಚ್ ಸೊಸೈಟಿ (ಐ.ಎನ್.ವೈ.ಎಸ್. ಎಂ.ಆರ್.ಎಸ್) ಜಿಂದಾಲ್ ನಗರ, ತುಮಕೂರು ರಸ್ತೆ, ಬೆಂಗಳೂರು-560 073. ರವರಿಗೆ ತೋಟಗಾರಿಕೆ, ಪುಷ್ಪೋದ್ಯಮ ಮತ್ತು ಸಾವಯವ ಕೃಷಿಯ ಮೂಲಕ ತರಕಾರಿ ಬೆಳೆಯುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I) (II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.03 ರಂತೆ ತೋಟಗಾರಿಕೆ, ಪುಷ್ಪೋದ್ಯಮ ಮತ್ತು ಸಾವಯವ ಕೃಷಿಯ ಮೂಲಕ ತರಕಾರಿ ಬೆಳೆಯುವ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ. 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಸದರಿ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ.

ಪಿ.ಆರ್.799

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**
**ನಂ. 132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು-560 027**
**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ ಯು.ಬಿ.ಎಫ್/92/2004-05**

**ಅರ್ಜಿದಾರರು :** **ವಿರುದ್ಧ** **ಎದುರು ಅರ್ಜಿದಾರರು:**

1) ಅರ್ಬನ್ ಕೋ-ಆಪ್ ಬ್ಯಾಂಕ್ ಲಿ., ಸಿದ್ದಪುರ

1) ಶ್ರೀನಿವಾಸ ಶೇಷಗಿರಿ ಭಟ್ಟ, ಮಹಾಲಸಾ ಜನರಲ್ ಸ್ಟೋರ್ಸ್, ಸಿದ್ದಾಪುರ.
2) ರಾಘವೇಂದ್ರ ಶೇಷಗಿರಿ ಭಟ್ಟ, ಮಹಾಲಸಾ ಜನರಲ್ ಸ್ಟೋರ್ಸ್, ಸಿದ್ದಾಪುರ
3) ಶೇಷಗಿರಿ ಅನಂತ ಭಟ್ಟ, ಮಹಾಲಸಾ ಜನರಲ್ ಸ್ಟೋರ್ಸ್, ಸಿದ್ದಾಪುರ.
4) ಚಂದ್ರಕಾಂತ ಪರುಶುರಾಮ ಶೇಟ, ಹಾಳದಕಟ್ಟ ಕೊಂಡ್ಲಿ ತಾ: ಸಿದ್ದಾಪುರ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು.**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ: 17.07.2004 ರವರೆಗೆ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ. 23,01,500.00 (ಇಪ್ಪತ್ತೂರು ಲಕ್ಷದ ಒಂದು ಸಾವಿರದ ಐನೂರುಗಳು ಮಾತ್ರ) ಗಳನ್ನು ಹಾಗೂ ದಿನಾಂಕ: 31.03.2005 ರಿಂದ ಶೇ.17.5 ರಂತೆ ಬಡ್ಡಿಯೊಂದಿಗೆ ವಸೂಲು ಮಾಡಲು ವಾದಿಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.
2. ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜೆಆರ್‌ಡಿ/ಯುಬಿಎಫ್/92/2005-06 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.
3. 2,3 ಮತ್ತು 4ನೇ ಪ್ರತಿವಾದಿಗಳು 1ನೇ ಪ್ರತಿವಾದಿಯವರು ವಾದಿ ಬ್ಯಾಂಕಿನಿಂದ ಪಡೆದಿರುವ ಸಾಲಕ್ಕೆ ಜಾಮೀನುದಾರರಾಗಿರುತ್ತಾರೆ.
4. ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 3ನೇ ಪ್ರತಿವಾದಿಯಾದ ಶ್ರೀ ಶೇಷಗಿರಿ ಅನಂತಭಟ್ಟ ಇವರ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement)ವನ್ನು ನೀಡುವಂತೆ ಕೋರಿರುತ್ತಾರೆ.
5. 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು/ ಡಿಕ್ರಿ ನೀಡಿದ್ದರೂ ಸದರಿ ತೀರ್ಪು/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
6. ವಾದಿಯ ದಾವಾ ಅರ್ಜಿ ಮತ್ತು ಅಫಿಡೇವಿಟ್‌ಯೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 3ನೇ ಪ್ರತಿವಾದಿಯ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.
7. ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್‌ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು

ಚಲಾಯಿಸುತ್ತಾ ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

3ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.23,02,000.00 (ಇಪ್ಪತ್ಮೂರು ಲಕ್ಷದ ಎರಡು ಸಾವಿರಗಳು ಮಾತ್ರ) ಗಳನ್ನು ವ್ಯಾಜ್ಯ ದಿನಾಂಕದಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 17.5ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ 15.06.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್/ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ 3ನೇ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಪ್ರಕರಣವನ್ನು ದಿನಾಂಕ: 21.06.2005 ರಂದು ಮಧ್ಯಾಹ್ನ 3.00 ಕ್ಕೆ ವಿಚಾರಣೆಗೆ ನಿಗದಿಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

3ನೇ ಪ್ರತಿವಾದಿಯಾದ ಶ್ರೀ ಶೇಷಗಿರಿ ಅನಂತ ಭಟ್, ಮಹಾಲಸಾ ಜನರಲ್ ಸ್ಟೋರ್ಸ್, ಸಿದ್ದಾಪುರ ಇವರ ಹೆಸರಿನಲ್ಲಿರುವ ಕೊಂಡಲಿ ಸರ್ವೆ ನಂ. 84, ಸಿದ್ದಾಪುರ ಟೌನ್, ಅಳತೆ 0-1-0 (ಒಂದು ಗುಂಟೆ) ಖರಾಬ್ ಸಿಮೆಂಟ್ ಶೀಟ್ ಚಾವಣಿಯ ನಿರ್ಮಿಸಿದ ಕಟ್ಟಡ ಒಳಗೊಂಡು ಚಕ್ಕುಬಂದಿ:

ಪೂರ್ವಕ್ಕೆ : ಚಂದ್ರಘಟ್ಗಿ ಇವರ ಖಾಲಿ ಜಾಗ
ಪಶ್ಚಿಮಕ್ಕೆ : ಸಾರ್ವಜನಿಕ ರಸ್ತೆ,
ಉತ್ತರಕ್ಕೆ : ಸಾರ್ವಜನಿಕ ಘಟರ್
ದಕ್ಷಿಣಕ್ಕೆ : ಚಂದ್ರಘಟ್ಗಿ ಇವರ ಬಾಡಿಗೆ ಮನೆ

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 16.05.2005 ರಂದು ನೀಡಿರುತ್ತೇನೆ.

**ಆರ್. ಎಂ. ನಟರಾಜ್**
ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441),
ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

ಪಿ.ಆರ್.800

## ಕಾರ್ಯಾಲಯ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ, ಜಿಆರ್‌ಬಿಸಿಸಿ ಉಪವಿಭಾಗ ನಂ. 5 ಗೋಕಾಕ್

**ನಂ. ಕನೀನಿನಿ:ಘಬಕಾನಿ:ಉವಿ-5: ಕ.ಮಾ.ಹ.ಅ:2005-06 ದಿನಾಂಕ: 16ನೇ ಮೇ 2005**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ 3ನೇ ಪ್ರಕರಣದ (ಬಿ) ತಂಡದ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ, ಘಬಕಾನಿ ಉಪವಿಭಾಗ ನಂ.5 ಗೋಕಾಕ-591307 ಕಚೇರಿಯ ವಿವರಗಳ ಪ್ರಕಟಣೆ.

**1) ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:-** ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ, ಘಬಕಾನಿ ಉಪವಿಭಾಗ ನಂ. 5 ಗೋಕಾಕ ಕಚೇರಿಯ ಗೋಕಾಕದಲ್ಲಿ ಕಾರ್ಯನಿರ್ವಹಿಸುತ್ತಿದೆ. ಶ್ರೀ ಎಚ್.ಪಿ. ಸಿದ್ದಾಪೂರ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಈ ಕಚೇರಿಯ ಕಾರ್ಯಭಾರವನ್ನು ಹೊಂದಿರುವರು. ಈ ಕಚೇರಿಯಲ್ಲಿ 4 ಸಹಾಯಕ ಇಂಜಿನೀಯರ, 1 ಕಿರಿಯ ಇಂಜಿನೀಯರ್, 4 'ಸಿ' ವರ್ಗದ ಹುದ್ದೆಯ ಸಿಬ್ಬಂದಿಗಳು 3 'ಡಿ' ವರ್ಗದ ಹುದ್ದೆಯ ಸಿಬ್ಬಂದಿಗಳು, ಸೂಪರ್‌ನ್ಯೂಮರರಿ ಹುದ್ದೆಯಲ್ಲಿ 4 'ಸಿ' ವರ್ಗದ ಮತ್ತು 16 'ಡಿ' ವರ್ಗದ ಸಿಬ್ಬಂದಿಗಳು ಸದರೀ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವರು.

ಈ ಕೆಳಕಂಡ ಕಾರ್ಯಗಳು ಘಬಕಾನಿ ಉಪವಿಭಾಗ ನಂ. 5 ಗೋಕಾಕ ವ್ಯಾಪ್ತಿಯಲ್ಲಿ ಬರುತ್ತವೆ.

1) ಈ ಉಪವಿಭಾಗಕ್ಕೆ ವಹಿಸಲಾದ ಭಾರೀ ಮತ್ತು ಮಧ್ಯಮ ನೀರಾವರಿ ಯೋಜನೆಗಳು;
1) ಘಟಪ್ರಭಾ ಬಲದಂಡೆ ಕಾಲುವೆ ಕಿಮೀ ನಂ. 40 ರಿಂದ 45 ಹೂಲಿಕಟ್ಟೆ, ಅಜ್ಜನಕಟ್ಟೆ, ಹಿರೇಹಟ್ಟಿ-1, ಮತ್ತು 11 ಹಾಗೂ ಬೆಟಗೇರಿ-11 ಬ್ಲಾಕ್ ನಂ.9 ವಿತರಣಾ ಕಾಲುವೆ ಹಾಗೂ ಹೊಲಗಾಲುವೆ ಕೆಲಸಗಳ ಉಸ್ತುವಾರಿ.
2) ಮಾರ್ಕಂಡೇಯ ಬಲದಂಡೆ ಕಾಲುವೆಯ ಕಿಮೀ ನಂ.59 ರಿಂದ 71ರ ಕೆಲಸದ ನಿರ್ಮಾಣದ ಹಾಗೂ ನಿರ್ವಹಣೆ ಮತ್ತು ಹಂಚುಕಾಲುವೆ ಸಂಖ್ಯೆ-21 ಮತ್ತು 35 ರಿಂದ 45 ನಿರ್ವಹಣೆ ಹಾಗೂ ಇದರ ಅಡಿಯಲ್ಲಿ ಬರುವ ಹೊಲಗಾಲುವೆಗಳ ನಿರ್ಮಾಣ ಹಾಗೂ ನಿರ್ವಹಣೆ.
3) ಈ ಉಪವಿಭಾಗಕ್ಕೆ ವಹಿಸಲಾದ ನೀರಾವರಿ ಯೋಜನೆಗಳನ್ನು ಶೀಘ್ರವಾಗಿ ಕಾರ್ಯಗತಗೊಳಿಸಲಾಗುವುದು.
4) ಜಿಆರ್‌ಬಿಸಿಸಿ ಬಡಾವಣೆ ಕಾಲೋನಿಯಲ್ಲಿರುವ ಮನೆಗಳ ಹಾಗೂ ಕಚೇರಿಗಳ ನಿರ್ವಹಣೆ ಕೆಲಸ.

ಈ ಉಪವಿಭಾಗದ ವ್ಯಾಪ್ತಿಯಲ್ಲಿ ಬರುವ ಯೋಜನೆಗಳಿಗೆ ಸಂಬಂಧಿಸಿದಂತೆ ಕಾಮಗಾರಿಗಳ, ಗುರಿ ಮತ್ತು ಸಾಧನೆ ಮಾಹಿತಿಯನ್ನು ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಸಲ್ಲಿಸುವುದು.

2) ಅಧಿಕಾರಿಗಳ ಕರ್ತವ್ಯಗಳು ಮತ್ತು ನಿರ್ವಹಿಸುತ್ತಿರುವ ವಿಷಯಗಳ ವಿವರ.

| ಅಧಿಕಾರಿಗಳ ಹೆಸರು | ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯಗಳು. |
|---|---|---|
| 1) ಶ್ರೀ ಎಚ್.ಪಿ. ಸಿದ್ದಾಪುರ | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು. | ಉಪವಿಭಾಗದ ಎಲ್ಲಾ ರೀತಿಯ ಕಾಮಗಾರಿ ತಾಂತ್ರಿಕ ಶಾಖೆ, ಆಡಳಿತ ಶಾಖೆ ಎಲ್ಲಾ ವಿಷಯಗಳ ಕಾರ್ಯಭಾರ. |

ಉಪವಿಭಾಗದ ಕಚೇರಿಯ ಅಧಿಕಾರಿಗಳು ಹಾಗೂ ನೌಕರರು ಕಚೇರಿಯ ಕೈಪಿಡಿ ಮತ್ತು ಕಚೇರಿಯ ಕಾರ್ಯವಿಧಾನದಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನದ ಅನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಿರುತ್ತಾರೆ.

2) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ರ ಪ್ರಕರಣ (2) ಖಂಡ (ಎ) (ಸಿ) ಹಾಗೂ ಪ್ರಕರಣ 7ರ ಪ್ರಕಾರ ಈ ಉಪವಿಭಾಗ ಕಚೇರಿಗೆ ಸಂಬಂಧಿಸಿ ಈ ಕೆಳಕಂಡ ಪ್ರಾಧಿಕಾರಿಗಳನ್ನು ರಚಿಸಲಾಗಿದೆ.

| | | |
|---|---|---|
| ಪ್ರಕರಣ-2 ಖಂಡ (ಸಿ). | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಕನೀನಿನಿ, ಘಬಕಾನಿ ಉಪವಿಭಾಗ ನಂ. 5 ಗೋಕಾಕ. | ಸಾರ್ವಜನಿಕ ಪ್ರಾಧಿಕಾರ |
| ಪ್ರಕರಣ-2 ಖಂಡ (ಎ). | ಕಾರ್ಯನಿರ್ವಾಹಕ ಅಭಿಯಂತರರು, ಕನೀನಿನಿ, ಘಬಕಾನಿ ವಿಭಾಗ ನಂ. 3 ಗೋಕಾಕ | ಸಕ್ಷಮ ಪ್ರಾಧಿಕಾರ |
| ಪ್ರಕರಣ-7 | ಅಧೀಕ್ಷಕ ಅಭಿಯಂತರು, ಕನೀನಿನಿ, ಘಬಕಾನಿ ವೃತ್ತ ಹಿಡಕಲ್ ಡ್ಯಾಮ | ಅಪೀಲು ಪ್ರಾಧಿಕಾರ |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವುದು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

**ಎಚ್. ಪಿ. ಸಿದ್ದಾಪೂರ**

ಪಿ.ಆರ್.801

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು,
ಕನೀನಿನಿ, ಘಬಕಾನಿ ಉಪವಿಭಾಗ ನಂ. 5 ಗೋಕಾಕ.

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/206/ಡಿಟಿಸಿಆರ್/2003-04 ದಿನಾಂಕ: 16ನೇ ಮೇ 2005**

**ಉಪಸ್ಥಿತರು :** ಎನ್. ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು :**
ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ,
ಬಂಟ್ವಾಳ.

**ವಿರುದ್ಧ**

**ಆರೋಪಿಗಳು:**
ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**
ಪ್ರವೀಣ್ ಕೊಟ್ಟಾರಿ, ಬಿನ್ ನಾರಾಯಣ ಕೊಟ್ಟಾರಿ, ಡೋರ್ ನಂ.1/30
ಜಿ. ನಿಲಯ, ಎನ್.ಆರ್. ಕಲ್ಲಡ್ಕ, ರೈಲ್ವೆ ನಿಲ್ದಾಣ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 19.03.2004 ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿ ಸಮೇತ ಇಲಾಖಾ ವಾಹನದಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ, ಬಂಟ್ವಾಳ ತಾಲ್ಲೂಕು ಅಮ್ಟೂರ್ ಗ್ರಾಮದ ರಾಯಪ್ಪ ಕೋಡಿ ರೈಲ್ವೆ ಕ್ರಾಸ್ ಬಳಿ ಒಂದು ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-1882 ರಲ್ಲಿ ಸವಾರನು ಮತ್ತು ಹಿಂದೆ ಕುಳಿತ್ತಿದ್ದ ವ್ಯಕ್ತಿಯ ತೊಡೆಯ ಮೇಲೆ ಒಂದು ಬಿಳಿ ಪಾಲಿಥಿನ್ ಚೀಲದ ಕಟ್ಟನ್ನು ಹಿಡಿದುಕೊಂಡು ಬರುತ್ತಿರುವುದನ್ನು ಗಮನಿಸಲಾಗಿ, ಸಂಶಯದ ಮೇರೆಗೆ ಮೋಟಾರು ಸೈಕಲ್ ಸವಾರನಿಗೆ ನಿಲ್ಲಿಸಲು ಸೂಚನೆ ನೀಡಿದಾಗ, ಮೋಟಾರ್ ಸೈಕಲ್‌ನ ಸವಾರ ಸಮವಸ್ತ್ರದಲ್ಲಿದ್ದ ಅಧಿಕಾರಿಯವರನ್ನು ಕಂಡು ಗಾಬರಿಯಿಂದ ಮೋಟಾರ್ ಸೈಕಲ್ ಸಮೇತ ರಸ್ತೆ ಬದಿಗೆ ಬಿದ್ದು, ಮೋಟಾರ್ ಸೈಕಲ್ ಮತ್ತು ಕಟ್ಟನ್ನು ಮಾರ್ಗಬದಿಯಲ್ಲಿಯೇ ಬಿಟ್ಟು ಪರಾರಿಯಾದನು. ಅವನನ್ನು ಹಿಡಿಯಲು ಪ್ರಯತ್ನಿಸಿದರೂ ಫಲಕಾರಿಯಾಗಿರುವುದಿಲ್ಲ. ನಂತರ ಸಂಶಯದ ಮೇರೆಗೆ ಪಾಲಿಥಿನ್ ಚೀಲದ ಕಟ್ಟನ್ನು ಪರಿಶೀಲಿಸಿದಾಗ, ಅದರಲ್ಲಿ 100 ಎಂ.ಎಲ್.ನ 300 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂದಿತು. ಇದು ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರಿಂದ, ಸದರಿ ಸಾರಾಯಿಯಿಂದ ರಾಸಾಯನಿಕ ಪರೀಕ್ಷೆಗಾಗಿ 4 ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದು ಅದನ್ನು ದಾರದಿಂದ ಕಟ್ಟಿ ಅರಗು ಹಾಕಿ ಸೀಲ್ ಮಾಡಿ ಪಂಚರ ಸಹಿಯನ್ನು ಅಂಟಿಸಿ ಹಾಗೂ ಉಳಿದ ಸ್ಯಾಚೆಟ್‌ಗಳಿಗೂ ಇದೇ ರೀತಿ ಅಂಟಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14ರ ಜೊತೆಗೆ 32, 34 ಮತ್ತು 38(ಎ)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಓಡಿ ಹೋದ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 11/2003-04 ದಿನಾಂಕ: 19.3.2004 ರಂದು ಮೊಕದ್ದಮೆ ದಾಖಲಿಸಿಕೊಡು ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೂ ಹಾಗೂ ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ತೆಗೆಯಲಾದ ಸಾರಾಯಿ ಮಾದರಿ ಸ್ಯಾಚೆಟ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕಳುಹಿಸಲಾಗಿದ್ದು, ರಾಸಾಯನಿಕ ತಜ್ಞರ ವರದಿ ಸಂಖ್ಯೆ: ಬಿ-397/4 ದಿನಾಂಕ: 16.7.2004ರ ಪ್ರಕಾರ ಸಾರಾಯಿಯ ಮದ್ಯಸಾರದ ತೀಕ್ಷ್ಣತೆಯು 32.12% ಆಗಿದ್ದು, ಇದು ಸರ್ಕಾರಿ ಸಾರಾಯಿ ತೀಕ್ಷ್ಣತೆಯಿಂದ ಕಡಿಮೆ ಇರುತ್ತದೆ ಎಂದು, ಇದು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗರವರ ವರದಿ ಮೇರೆಗೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 26.02.2005 ರಂದು ಆದೇಶ ನೀಡಲಾಗಿರುತ್ತದೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-1882ರ 'ಬಿ' ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ಸದರಿ ವಾಹನವು ಶ್ರೀ ಪ್ರವೀಣ್ ಕೊಟ್ಟಾರಿ, ಬಿನ್ ನಾರಾಯಣ ಕೊಟ್ಟಾರಿ, ಡೋರ್ ನಂ. 1-30 ಜಿ ನಿಲಯ, ಎನ್.ಆರ್. ಕಲ್ಲಡ್ಕ, ರೈಲ್ವೆ ಸ್ಟೇಷನ್, ಮಂಗಳೂರು ಇವರು ವಾಹನದ ಮಾಲೀಕರಾಗಿದ್ದು, ಈ ವಾಹನದ ಹೆಚ್.ಪಿ.ಎ. ರವರಾದ ಎಸ್ಕಾರ್ಟ್ಸ್ ಕನ್ಸ್ಯೂಮರ್ ಕ್ರೆಡಿಟ್ ಲಿ., ಕರಂಗಲ್‌ಪಾಡಿ, ಮಂಗಳೂರುರವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಾಲಂ 43(ಬಿ) ರಂತೆ ಕಾರಣ ಕೇಳಿ

ನೋಟೀಸನ್ನು ದಿನಾಂಕ: 26.2.2005 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸು ವಾಹನ ಮಾಲೀಕರು ಮತ್ತು ವಾಹನದ ಹೆಚ್.ಪಿ.ಎ. ರವರಿಗೆ ನೋಟೀಸು ಸ್ವೀಕೃತಿಯಾಗಿ, ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ವಶಪಡಿಸಿಕೊಂಡ ವಾಹನವು ಸುಮಾರು 1 ವರ್ಷ 1 ತಿಂಗಳು ಕಳೆದಿದ್ದರೂ, ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಕೋರಿ ಅರ್ಜಿ ಸಲ್ಲಿಸಿರುವುದಿಲ್ಲ ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರವು ನೀಡಿದ ಕಾರಣ ಕೇಳಿ ನೋಟೀಸನ್ನು ಸ್ವೀಕರಿಸಿದರೂ ಈವರೆಗೆ ವಾಹನದ ಬಿಡುಗಡೆಗಾಗಿ ಈ ಪ್ರಾಧಿಕಾರದ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ, ಸರಕಾರದ ಅಭಿಯೋಜನಾ ಪರವಾಗಿ ಒಂದು ಸಾಕ್ಷಿಯ ವಿಚಾರಣೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಪ್ರತಿರಕ್ಷೆ ಪರ ಯಾವುದೇ ಸಾಕ್ಷಿಗಳನ್ನು ಸಲ್ಲಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 19.3.2004 ರಂದು ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-1882 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಲಾಗಿತ್ತೇ?
2. ಸದರಿ ವಾಹನದ ಮಾಲೀಕರು ತಾವೆಂದು ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುವುದನ್ನು ಸಾಬೀತು ಪಡಿಸಿದ್ದಾರೆಯೇ?
3. ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾ ಅಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಲಾಗಿದೆ.

**ಪ್ರಾ.ಸಾ:-1**

ಶ್ರೀ ಅಮರ್‌ನಾಥ್ ಎಸ್. ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿರುತ್ತಾರೆ. ಇವರು ದಿನಾಂಕ: 13.4.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ತಾನು ದಿನಾಂಕ: 19.03.2004 ರಂದು ಸಾಯಂಕಾಲ 5.00 ಗಂಟೆ ಸಮಯಕ್ಕೆ ಬಂಟ್ವಾಳ ತಾಲೂಕಿನ ಅಮ್ಟೂರ್ ಗ್ರಾಮದ ಮಾರ್ಗನಾಡು ಚರ್ಚ್‌ಗೆ ಹೋಗುವ ದಾರಿಯಲ್ಲಿ ರಾಯಪ್ಪಕೋಡಿ ರೈಲ್ವೆ ಕ್ರಾಸ್ ಬಳಿ ಗಸ್ತು ಕರ್ತವ್ಯ ನಿರ್ವಹಿಸುತ್ತಿರುವಾಗ, ರೈಲ್ವೆ ಕ್ರಾಸ್ ಕಡೆಯಿಂದ ಒಂದು ಹೀರೊ ಹೊಂಡಾ ಮೋಟಾರು ಸೈಕಲ್ ಬರುತ್ತಿರುವುದನ್ನು ನೋಡಿದೆವು. ಅದನ್ನು ನಿಲ್ಲಿಸಲು ಸೂಚನೆ ನೀಡಿದೆವು. ಸದರಿ ವಾಹನದಲ್ಲಿ 2 ಜನ ಸವಾರರಿದ್ದರು. ಸದರಿ ಸವಾರರು ನಮ್ಮನ್ನು ನೋಡಿ ರಸ್ತೆಯ ಬದಿ ಮಣ್ಣಿನ ಮೇಲೆ ಬಿದ್ದರು. ನಾವು ಕೂಡಲೇ ನಮ್ಮ ವಾಹನವನ್ನು ನಿಲ್ಲಿಸಿ ವಾಹನದಿಂದ ಇಳಿದು ಬೈಕ್ ಬಿದ್ದ ಸ್ಥಳಕ್ಕೆ ಹೋದೆವು. ಸದರಿ ಬೈಕಿನೊಂದಿಗೆ ಇದ್ದ ಪಾಲಿಥಿನ್ ಬ್ಯಾಗನ್ನು ಪರಿಶೀಲಿಸಿದಾಗ, ಅದರಲ್ಲಿ 100 ಎಂ.ಎಲ್.ನ. 300 ಸಾರಾಯಿ ಸ್ಯಾಚೆಟ್‌ಗಳು ಪತ್ತೆಯಾದವು. ಕೂಡಲೇ ಸ್ಥಳಕ್ಕೆ 2 ಜನ ಸಾಕ್ಷಿದಾರರನ್ನು ಕರೆಸಿದೆವು. ಪಾಲಿಥಿನ್ ಬ್ಯಾಗ್‌ನಲ್ಲಿದ್ದ 300 ಸಾರಾಯಿ ಸ್ಯಾಚೆಟ್‌ಗಳನ್ನು ಅವರಿಗೆ ತೋರಿಸಿದೆವು. ಸದರಿ ಸ್ಯಾಚೆಟ್‌ಗಳಿಂದ 4 ಸ್ಯಾಚೆಟ್‌ಗಳನ್ನು ಪ್ರತ್ಯೇಕಿಸಿ ಮಾದರಿ ಸ್ಯಾಚೆಟ್‌ಗಳನ್ನು ತಯಾರಿಸಿದೆವು. ಅವುಗಳಿಗೆ ಅರಗಿನಿಂದ ಸೀಲ್ ಮಾಡಿ ಪಂಚರ ಸಹಿಯನ್ನು ಹಾಕಿಸಿದೆವು. ಇದು ಅಕ್ರಮ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಿದ ಮೋಟಾರು ಸೈಕಲನ್ನು ಪರಿಶೀಲಿಸಿದಾಗ ಅದರ ನೋಂದಣಿ ಸಂ: ಕೆಎ-19-ಎಲ್-1882 ಆಗಿದ್ದು, ಇದರ ಇಂಜಿನ್ ನಂಬ್ರ ಮತ್ತು ಚಾಸಿಸ್ ನಂಬ್ರವನ್ನು ಪರಿಶೀಲಿಸಿ ಮಹಜರ್‌ನಲ್ಲಿ ನಮೂದಿಸಿದೆವು. ಓಡಿ ಹೋದ ವ್ಯಕ್ತಿಗಳನ್ನು ಹಿಡಿಯಲು ಪ್ರಯತ್ನಿಸಿದಾಗ ವ್ಯಕ್ತಿಗಳು ಸಿಗಲಿಲ್ಲ, ನಂತರ ಎಲ್ಲಾ ಸೊತ್ತುಗಳನ್ನು ವಶಪಡಿಸಿಕೊಂಡು ಕಛೇರಿಗೆ ತಂದೆವು. ಮಹಜರಿನ ವಾಯಾ ಪ್ರತಿಯನ್ನು ನಿಶಾನೆ ಪಿ-1 ಎಂದು, ಪ್ರಥಮ ಮಾಹಿತಿ ವರದಿಯ ವಾಯಾ ಪ್ರತಿಯನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಅಧಿಕೃತ ಅಧಿಕಾರಿಗಳವರಿಗೆ ಸಲ್ಲಿಸಿದ ವರದಿಯನ್ನು ನಿಶಾನೆ ಪಿ-3 ಎಂದು, ರಾಸಾಯನಿಕ ಕೆಮಿಕಲ್ ವರದಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತೆಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಿಗೆ ಹಾಜರಾತಿ ನೋಟೀಸು ನೀಡಿದರೂ ಈ ಪ್ರಾಧಿಕಾರದ ಮುಂದೆ ಅವರಾಗಲೀ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿರುವುದಿಲ್ಲ. ಆದುದರಿಂದ ಪಾಟೀಸವಾಲು ಇಲ್ಲವೆಂದು ಪರಿಗಣಿಸಲಾಯಿತು.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 1 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಈ ಪ್ರಕರಣದಲ್ಲಿ ಪ್ರಾ.ಸಾ-1 ರವರು ನೀಡಿರುವ ಸಾಕ್ಷಿ ಪೂರಕವಾಗಿದ್ದು, ಇವರು ನೀಡಿರುವ ಹೇಳಿಕೆಯ ಮೇರೆಗೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 19.03.04 ರಂದು ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-1882 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಆಗಿರುವುದು ಸಾಬೀತಾಗಿದ್ದು, ಅಕ್ರಮ ಸಾಗಾಣಿಕೆ ನಿಜವೆಂದು ಕಂಡು ಬರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

ಸದರಿ ಅಕ್ರಮ ಸಾರಾಯಿಯ ಸಾಗಾಣಿಕೆಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಅಗತ್ಯ ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯ ಆಗಿರುತ್ತವೆ. ಹಾಗೂ ಯಾವುದೇ ಸಾಕ್ಷ್ಯಾಧಾರಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹಾಜರುಪಡಿಸಿರುವುದಿಲ್ಲ. ಹಾಗೂ ಸದರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಬೀತು ಪಡಿಸಿರುವುದಿಲ್ಲ ಈ ಕಾರಣಗಳಿಂದ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ. ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆ ಆಗಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ,

ಜಪ್ತಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ಪರಿಗಣಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್. ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 11/2003-04 ದಿನಾಂಕ: 19.03.2004 ರಲ್ಲಿ ಜಪ್ತುಪಡಿಸಿಕೊಂಡಿರುವ ವಾಹನ ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19-ಎಲ್-1882ನ್ನು ನಿಯಮ 43(ಎ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 16.05.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ:1 ಶ್ರೀ ಅಮರ್‌ನಾಥ್ ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಮಹಜರು ಪ್ರತಿ.
ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿಯ ಛಾಯಾ ಪ್ರತಿ.
ನಿಶಾನೆ ಪಿ-3 - ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ ವರದಿ.
ನಿಶಾನೆ ಪಿ-4 - ಕೆಮಿಕಲ್ ವರದಿಯ ಪ್ರತಿ.

**ಅನುಬಂಧ-3**

**ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

-ಯಾವುದೂ ಇರುವುದಿಲ್ಲ-

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

-ಯಾವುದೂ ಇರುವುದಿಲ್ಲ-

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.802

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ ಸಂಖ್ಯೆ: ಎಸ್‌ಡಿಕೆ/183/ಡಿಟಿಸಿಆರ್/2004-05 ದಿನಾಂಕ: 16ನೇ ಮೇ 2005

**ಉಪಸ್ಥಿತರು :** ಎನ್. ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು :** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು. | | 1. ಎ. ಶೇಖರ್ (39 ವರ್ಷ) ಬಿನ್ ಅಯ್ಯನಾರ್ ತಿರುಕೊಯ್ಯೂರು ತಾಲ್ಲೂಕು, ದೇವನೂರು, ತಮಿಳುನಾಡು ರಾಜ್ಯ.<br>2. ಮುತ್ತುಲಿಂಗಂ, ಬಿನ್ ಪೊನ್ನು, ನಂ. 2 ಎ ಹಳೆಸೀರು ವಂಗೋರ್, ಹಳೆಸೀರು ವಂಗೋರ್ ಅಂಚೆ, ಶಂಕರಪುರಂ ತಾಲ್ಲೂಕು, ತಮಿಳುನಾಡು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 20.11.2004 ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿ ಸಮೇತ ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಇಲಾಖಾ ಜೀಪಿನಲ್ಲಿ ಕೂಡಿಕೊಂಡು ಪುತ್ತೂರು ತಾಲ್ಲೂಕು ಇಚ್ಲಂಪಾಡಿ ಗ್ರಾಮದ ರಾಷ್ಟ್ರೀಯ ಹೆದ್ದಾರಿ-48 ರಲ್ಲಿ ಪೆರಿಯಾ ಶಾಂತಿ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಗುಂಡ್ಯ ಕಡೆಯಿಂದ ಮಂಗಳೂರು ಕಡೆಗೆ ಒಂದು ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಟಿಎನ್-41-ಎಂ-9824 ಬರುತ್ತಿರುವುದನ್ನು ಕಂಡು ಸದರಿ ಲಾರಿಯನ್ನು ನಿಲ್ಲಿಸಿ ಅದರ ಚಾಲಕನನ್ನು ವಿಚಾರಿಸಿದಾಗ, ಸದರಿ ಲಾರಿ ಖಾಲಿ ಎಂದು ತಿಳಿಸಿದನು. ಸಂಶಯದ ಮೇರೆಗೆ ಲಾರಿಯ ಮೇಲೆ ಹತ್ತಿ ನೋಡಿದಾಗ ಮೇಲ್ನೋಟಕ್ಕೆ ಖಾಲಿಯಿದ್ದಂತೆ ಕಂಡು ಬಂದಿತು. ಸದರಿ ಲಾರಿಯನ್ನು ಶೋಧನೆ ಮಾಡಲು ತೀರ್ಮಾನಿಸಿ ಖಾಸಗಿ ಸಾಕ್ಷಿಗಳು ಯಾರೂ ದೊರಕದೇ ಇರುವ ಪ್ರಯುಕ್ತ ಸಿಬ್ಬಂದಿಯವರನ್ನು ಸಾಕ್ಷಿಗಳನ್ನಾಗಿ ಬರಮಾಡಿಕೊಂಡು ಹಾಗೂ ಲಾರಿಯನ್ನು ಶೋಧಿಸಲು ಸರ್ಚ್ ವಾರಂಟ್ ತೆಗೆದುಕೊಳ್ಳುವುದು ಅಸಾಧ್ಯವಾಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 54ರ ಪ್ರಕಾರ ಶೋಧನೆ ಸಮುಚಿತ ಆಧಾರವನ್ನು ಸ್ಥಳದಲ್ಲೇ ತಯಾರಿಸಿ ಸಿಬ್ಬಂದಿಯವರ ಸಮಕ್ಷಮ ಶೋಧನೆ ಮಾಡಲಾಯಿತು. ಲಾರಿಯ ಪ್ಲಾಟ್‌ಫಾರಂನ್ನು ಪ್ಲೈವುಡ್‌ನಿಂದ ಮುಚ್ಚಲಾಗಿದ್ದು, ಪ್ಲಾಟ್‌ಫಾರಂನ ಮುಂಭಾಗದ ಕ್ಯಾಬಿನ್‌ನ ಬದಿಯಲ್ಲಿ ಸುಮಾರು 2 ಅಡಿ ಉದ್ದ ಹಾಗೂ ಅಗಲದಲ್ಲಿ ಪ್ರತ್ಯೇಕ ಪ್ಲೈವುಡ್‌ನ ಒಂದು ತುಂಡನ್ನು ಸ್ಕ್ರೂ ಮೂಲಕ ಜೋಡಿಸಲಾಗಿದ್ದು, ಆ ಸ್ಕ್ರೂನ್ನು ತೆಗೆದು ನೋಡಿದಾಗ ಲಾರಿಯಲ್ಲಿ ಕೃತಕವಾಗಿ ಟ್ಯಾಂಕನ್ನು ನಿರ್ಮಿಸಿ ಅದರೊಳಗೆ ಮದ್ಯಸಾರ ಇರುವುದು ಕಂಡು ಬಂದಿತು. ಲಾರಿಯ ಪ್ಲಾಟ್‌ಫಾರಂನಲ್ಲಿ ಸುಮಾರು 17 ಅಡಿ ಉದ್ದ ಹಾಗೂ 7 ಅಡಿ ಅಗಲದಲ್ಲಿ ಕಬ್ಬಿಣದ ಟ್ಯಾಂಕನ್ನು ನಿರ್ಮಿಸಿರುವುದು ಕಂಡು ಬಂದಿತು. ಸದರಿ ಚಾಲಕನ ಹಾಗೂ ಸಹಾಯಕನ ಹೆಸರು ಮತ್ತು ವಿಳಾಸ ಕೇಳಲಾಗಿ ಚಾಲಕ ನನ್ನ ಹೆಸರು ಎ. ಶೇಖರ್ (39 ವರ್ಷ), ಬಿನ್

ಅಯ್ಯನಾರ್, ತಿರುಕೊಯ್ಯೂರು ತಾಲೂಕು, ದೇವನೂರು, ತಮಿಳುನಾಡು ರಾಜ್ಯ ಹಾಗೂ ಇನ್ನೊಬ್ಬ ಮುತ್ತುಲಿಂಗಂ, ಬಿನ್ ಪೊನ್ನು, ನಂ.2 ಎ ಹಳೆಸೀರು ವಂಗೋರ್, ಹಳೆಸೀರು ವಂಗೋರ್ ಅಂಚೆ, ಶಂಕರಪುರಂ ತಾಲ್ಲೂಕು, ತಮಿಳುನಾಡು ಎಂದು ತಿಳಿಸಿರುತ್ತಾರೆ. ಸಾಗಾಟ ಮಾಡುತ್ತಿದ್ದ ಮದ್ಯಸಾರದ ಪ್ರಮಾಣವನ್ನು ಅಳತೆ ಮಾಡಲು ಅಥವಾ ಅಳತೆ ಮಾಡುವ ಸಾಧನಗಳು ಲಭ್ಯವಿಲ್ಲದ ಕಾರಣ ಮದ್ಯಸಾರದ ನಿಖರವಾದ ಪ್ರಮಾಣ ತಿಳಿದು ಬರುವುದಿಲ್ಲ. ಈ ಬಗ್ಗೆ ಲಾರಿಯ ಚಾಲಕನಲ್ಲಿ ವಿಚಾರಿಸಿದಾಗ ಸುಮಾರು 2,000.00 ಲೀಟರ್ ಮದ್ಯಸಾರ ಇರುತ್ತದೆ ಎಂದು ತಿಳಿಸಿರುತ್ತಾರೆ. ಈ ಮದ್ಯಸಾರವನ್ನು ಸಾಗಾಟ ಮಾಡಲು ಯಾವುದೇ ರಹದಾರಿ ಪತ್ರವನ್ನು ಹಾಜರುಪಡಿಸದೇ ಇರುವ ಪ್ರಯುಕ್ತ ಇದು ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಹಾಗೂ ಇದು ಕರ್ನಾಟಕ ಅಬಕಾರಿ ಕಾನೂನಿನಂತೆ ಅಪರಾಧವಾಗುತ್ತದೆ ಎಂದು ತಿಳಿಸಿ, ಸದರಿ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂ.ಎಲ್.ನ 3 ಸೀಸೆಗಳನ್ನು ತೆಗೆದು ಬಾಟಲ್‌ಗಳಿಗೆ ಮುಚ್ಚಳ ಹಾಕಿ, ಮುಚ್ಚಳಕ್ಕೆ ಬಟ್ಟೆಯನ್ನು ದಾರದಿಂದ ಸುತ್ತಿ ಇಲಾಖೆಯ ಸೀಲ್‌ನಿಂದ ಮೊಹರು ಮಾಡಲಾಯಿತು. ಆರೋಪಿಯ ಹೆಸರು, ವಿಳಾಸವಿರುವ ಗುರುತಿನ ಚೀಟಿಯನ್ನು ಮಾದರಿ ಬಾಟಲ್‌ಗಳಿಗೆ ಅಂಟಿಸಲಾಯಿತು. ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಗಳನ್ನು, ಮದ್ಯಸಾರವನ್ನು ಹಾಗೂ ಸಾಗಾಣಿಕೆಗೆ ಬಳಸಿದ ವಾಹನವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 11/2004-05 ದಿನಾಂಕ: 20.11.2004 ರಂದು ಮೊಕದ್ದಮೆ ದಾಖಲಿಸಿಕೊಂಡು ಈ ಪ್ರಾಧಿಕಾರಕ್ಕೂ ಹಾಗೂ ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರುರವರ ತನಿಖಾ ವರದಿ ದಿನಾಂಕ: 29.11.2004 ರ ಪತ್ರದಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರಿಶೀಲನೆಗೆ ಒಳಪಡಿಸಿದ್ದು, ರಾಸಾಯನಿಕ ತಜ್ಞರು, ಮಂಗಳೂರು ಇವರ ಪ್ರಮಾಣ ಪತ್ರ ದಿನಾಂಕ: 27.11.2004 ರಲ್ಲಿ ಮದ್ಯಸಾರದ ಪ್ರಮಾಣ ತಲಾ 94% ಯು.ಪಿ ಇರುವುದರಿಂದ, ಇದು ಮಾನವನ ಸೇವನೆಗೆ ಯೋಗ್ಯವಾಗಿದೆ ಎಂದು ದೃಢೀಕರಣ ಪತ್ರ ನೀಡಿರುವುದರಿಂದ ಮದ್ಯಸಾರವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವ ಮೇರೆಗೆ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ:183: ಡಿಟಿಸಿಆರ್: 2004-05, ದಿನಾಂಕ: 2.12.2004 ರಲ್ಲಿ ಅಬಕಾರಿ ಆಯುಕ್ತರವರ ಅನುಸಮರ್ಥನೆಗೆ ಒಳಪಡಿಸಿ ಹಾಗೂ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಸದ್ರಿ ಮದ್ಯಸಾರ 2,000.000 ಲೀಟರ್‌ನ್ನು ಮೆ: ಮೈ ಶುಗರ್ ಕಂಪೆನಿ, ಸಾರಾಯಿ ಸಂಸ್ಕರಣ ಘಟಕ, ಪಡೀಲ್, ಮಂಗಳೂರು ಇವರಿಗೆ ಹಂಚಿಕೆ ಮಾಡಿ ಆದೇಶ ನೀಡಲಾಗಿರುತ್ತದೆ.

ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರುರವರ ಪತ್ರ ಸಂಖ್ಯೆ: ಸಿಆರ್‌ಎಂ:11:2004-05 ದಿನಾಂಕ: 6.01.05ರ ತನಿಖಾ ವರದಿಯಲ್ಲಿ, ವಶಪಡಿಸಿಕೊಂಡ ಲಾರಿ ಸಂಖ್ಯೆ: ಟಿಎನ್-41-ಎಂ-9824ರ 'ಬಿ' ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಹೆಚ್ಚುವರಿ ನೊಂದಣಾಧಿಕಾರಿ, ಕೊಯಮುತ್ತೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದರಿಯವರು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಟಿಎನ್-41-ಎಂ-9824ನ್ನು ಈತನಕ ಯಾವುದೇ ವಾಹನಗಳಿಗೆ ನೋಂದಣಿ ಸಂಖ್ಯೆಯನ್ನಾಗಿ ನೀಡಲಾಗಿರುವುದಿಲ್ಲ ಎಂಬುವುದಾಗಿ ತಿಳಿಸಿರುತ್ತಾರೆ. ಆದುದರಿಂದ ವಾಹನದ ನೋಂದಣಿ ಸಂಖ್ಯೆ ನಕಲಿ ಹಾಗೂ ಸುಳ್ಳು ನೋಂದಣಿ ಸಂಖ್ಯೆಯಾಗಿದ್ದು ಹಾಗೂ ವಾಹನದ ಮಾಲೀಕತ್ವದ ಬಗ್ಗೆ ಈತನಕ ಈ ಪ್ರಾಧಿಕಾರದ ಮುಂದೆ ಯಾರೂ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ಸರ್ಕಾರದ ಆರ್ಥಿಕ ಹಿತದೃಷ್ಟಿಯಿಂದ ವಶಪಡಿಸಿಕೊಂಡ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ, ಸರಕಾರದ ಅಭಿಯೋಜನ ಪರ 2 ಸಾಕ್ಷಿಗಳನ್ನು ಪಡೆಯಲಾಗಿದೆ ಹಾಗೂ ಪ್ರಕರಣದಲ್ಲಿ ಯಾವುದೇ ಪ್ರತಿರಕ್ಷೆ ಸಾಕ್ಷಿಗಳನ್ನು ವಾಹನ ಮಾಲೀಕರಾಗಲೀ, ಆರೋಪಿಗಳಾಗಲೀ ಹಾಗೂ ಅವರ ಪರ ವಕೀಲರಾಗಲಿ ಸಲ್ಲಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತೆ ಇರುತ್ತದೆ.

1. ದಿನಾಂಕ: 20.11.2004 ರಂದು ವಾಹನ ಲಾರಿ ಸಂಖ್ಯೆ: ಟಿಎನ್-41-ಎಂ-9824 ರಲ್ಲಿ ಅಕ್ರಮವಾಗಿ 2,000.000 ಲೀಟರ್ ಮದ್ಯಸಾರ ಸಾಗಾಣಿಕೆ ಮಾಡಲಾಗಿತ್ತೇ?
2. ಸದರಿ ವಾಹನದ ಮಾಲೀಕರು ತಾವೆಂದು ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುವುದನ್ನು ಸಾಬೀತುಪಡಿಸಿದ್ದಾರೆಯೇ?
3. ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿರುವ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ-1:**

ಶ್ರೀ ಎನ್. ನಾರ್ಣಪ್ಪ ನಾಯ್ಕ್, ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ: 20.04.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ. ತಾನು ದಿನಾಂಕ: 20.11.2004 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿ ಸಮೇತ ತಮ್ಮ ಇಲಾಖಾ ಜೀಪಿನಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ಇಚ್ಲಂಪಾಡಿ ಗ್ರಾಮದ ಪೆರಿಯ ಶಾಂತಿ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಗುಂಡ್ಯ ಕಡೆಯಿಂದ ಮಂಗಳೂರು ಕಡೆಗೆ ಒಂದು ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಟಿಎನ್-41-ಎಂ-9824 ಬರುತ್ತಿರುವುದನ್ನು ಕಂಡು ನಿಲ್ಲಿಸಲು ಚಾಲಕನಿಗೆ ಸೂಚನೆ ನೀಡಿದಾಗ ಲಾರಿಯನ್ನು ನಿಲ್ಲಿಸಿದನು. ಲಾರಿಯನ್ನು ನೋಡಿದಾಗ ಅದು ಖಾಲಿ ಲಾರಿಯಾಗಿ ಕಂಡು ಬಂತು. ಸಂಶಯದ ಮೇರೆಗೆ ಲಾರಿಯನ್ನು ಶೋಧಿಸಿದಾಗ, ಅದರ ಪ್ಲಾಟ್‌ಫಾರಂನ್ನು ಪ್ಲೈವುಡ್‌ನಿಂದ ಮುಚ್ಚಲಾಗಿತ್ತು. ಕ್ಯಾಬಿನ್‌ನ ಬದಿಯಲ್ಲಿ ಸುಮಾರು 2 ಶೀಟ್ ಉದ್ದಗಲದ ಪ್ಲೈವುಡ್ ತುಂಡನ್ನು ಪ್ರತ್ಯೇಕವಾಗಿ ಜೋಡಿಸಿರುವುದು ಕಂಡು ಬಂತು. ಸದರಿ ಲಾರಿಯನ್ನು ಶೋಧಿಸಲು ಸರ್ಚ್ ವಾರೆಂಟ್ ತೆಗೆದುಕೊಳ್ಳದೇ ಇರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಾಲಂ 54ರ ಪ್ರಕಾರ ಸ್ಥಳದಲ್ಲಿ ಶೋಧನಾ ಸಮುಚಿತ ಆಧಾರ ತಯಾರಿಸಿದರು. ಖಾಸಗಿ ಸಾಕ್ಷಿದಾರರು ಯಾರೂ ದೊರಕದೇ ಇರುವ ಪ್ರಯುಕ್ತ ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿಸಿಕೊಂಡು ಲಾರಿಯನ್ನು ಶೋಧಿಸಿದಾಗ, ಅದರ ಕ್ಯಾಬಿನ್‌ನ ಬದಿಯಲ್ಲಿ 2 ಅಡಿ ಉದ್ದಗಲದ ಪ್ಲೈವುಡ್‌ನ್ನು ತೆಗೆದು ನೋಡಿದಾಗ ಟ್ಯಾಂಕನ್ನು ನಿರ್ಮಿಸಿರುವುದು ಕಂಡು ಬಂತು ಹಾಗೂ ಟ್ಯಾಂಕ್‌ಗೆ ಮುಚ್ಚಳವನ್ನು ಅಳವಡಿಸಿರುವುದು ಕಂಡು ಬಂತು. ಸದರಿ ಟ್ಯಾಂಕ್‌ನಲ್ಲಿ ಎಷ್ಟು ಮದ್ಯಸಾರ ಇದೆ ಎಂದು ಖಚಿತವಾಗಿ ಹೇಳಲು ಯಾವುದೇ ಅಳತೆ ಸಾಧನಗಳು ಇಲ್ಲದಿರುವುದರಿಂದ ಇದರಲ್ಲಿ ಸುಮಾರು

2,000.000 ಲೀಟರ್ ಮದ್ಯಸಾರ ಇರುವುದು ಖಚಿತಪಡಿಸಿಕೊಂಡೆವು. ಸದರಿ ಲಾರಿಯನ್ನು ಸಾಗಿಸುತ್ತಿದ್ದ ಚಾಲಕ ಹಾಗೂ ಸಹಾಯಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಲಾಗಿ, ಅವರ ಹೆಸರನ್ನು ಮಹಜರ್‌ನಲ್ಲಿ ನಮೂದಿಸಿರುತ್ತಾರೆ. ಮದ್ಯಸಾರವನ್ನು ಸಾಗಿಸಲು ಯಾವುದೇ ರಹದಾರಿ ಪತ್ರಗಳನ್ನು ಹಾಜರುಪಡಿಸದೇ ಇದ್ದ ಪ್ರಯುಕ್ತ, ಸದರಿ ಮದ್ಯಸಾರದಿಂದ 750 ಎಂ.ಎಲ್.ನ 3 ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಯಿತು. ಬಾಟ್ಲಿಗಳ ಮುಚ್ಚಳಕ್ಕೆ ಬಟ್ಟೆ ಸುತ್ತಿ ದಾರದಿಂದ ಕಟ್ಟಿ ಇಲಾಖೆಯ ಮೊಹರು ಮಾಡಲಾಯಿತು. ಹಾಗೂ ಆರೋಪಿಗಳ ಹೆಸರು ಮತ್ತು ವಿಳಾಸವಿರುವ ಗುರುತಿನ ಚೀಟಿಗಳನ್ನು ಬಾಟ್ಲಿಗಳಿಗೆ ಅಂಟಿಸಲಾಯಿತು. ಮಾದರಿ ಮೊಹರು ತಯಾರಿಸಿರುತ್ತಾರೆ. ಮಹಜರನ್ನು ಸ್ಥಳದಲ್ಲಿಯೇ ಬರೆದು, ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಸದರಿ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಕರಿಗೆ ಅಬಕಾರಿ ರಕ್ಷಕರ ಮೂಲಕ ಕಳುಹಿಸಲಾಯಿತು. ರಾಸಾಯನಿಕ ವಿಶ್ಲೇಷಕರು ದಿನಾಂಕ: 27.11.2004 ರಂದು ವಿಶ್ಲೇಷಣಾ ವರದಿಯನ್ನು ನೀಡಿರುತ್ತಾರೆ. ಸದರಿ ವರದಿಯಲ್ಲಿ ಮದ್ಯಸಾರವು ಉಪಯೋಗಕ್ಕೆ ಯೋಗ್ಯವಾಗಿದೆಯೆಂದು ತಿಳಿಸಿರುತ್ತಾರೆ. ನಂತರ ಸದರಿ ಮದ್ಯಸಾರವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅಧಿಕಾರಿಗಳಿಗೆ ದಿನಾಂಕ: 29.11.2004 ರಂದು ಪತ್ರ ಬರೆಯಲಾಗಿದೆ. ವಶಪಡಿಸಿಕೊಂಡ ಲಾರಿಯ ಮಾಲೀಕರ ಬಗ್ಗೆ ತಿಳಿದುಕೊಳ್ಳಲು ಅಡಿಷನಲ್ ರಿಜಿಸ್ಟರಿಂಗ್ ಅಥಾರಿಟಿ, ಕೊಯಮುತ್ತೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದರಿಯವರು ದಿನಾಂಕ: 2.12.2004 ರಂದು ಈ ಕಛೇರಿಗೆ ಪತ್ರ ಬರೆದಿದ್ದು, ಸದರಿ ಪತ್ರದಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಟಿಎನ್-41-ಎಂ-9824ನ್ನು ಇದುವರೆಗೂ ಯಾವುದೇ ವಾಹನಕ್ಕೂ ಈ ಕಛೇರಿಯಲ್ಲಿ ನೊಂದಣಿಯಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಮದ್ಯಸಾರವು ರಾಸಾಯನಿಕ ವಿಶ್ಲೇಷಕರ ವರದಿ ಪ್ರಕಾರ ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ: 183:ಡಿಟಿಸಿಆರ್:2004-05, ದಿನಾಂಕ: 2.12.2004ರ ಪ್ರಕಾರ ಮದ್ಯಸಾರವನ್ನು ಮೆ: ಮೈಶುಗರ್ ಕಂಪೆನಿ, ಸಾರಾಯಿ ಸಂಸ್ಕರಣ ಘಟಕ, ಪಡೀಲ್, ಮಂಗಳೂರು ಇವರಿಗೆ ಹಂಚಿಕೆ ಮಾಡಲು ಆದೇಶಿಸಿರುತ್ತಾರೆ. ನಂತರ ವಾಹನದ ಮಾಲೀಕರು ಯಾರೆಂದು ಕಂಡು ಬಾರದ ಕಾರಣ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಲಾಗಿರುತ್ತದೆ. ಮಹಜರಿನ ವಾಯಾ ಪ್ರತಿಯನ್ನು ನಿಶಾನೆ ಪಿ-1 ಎಂದು ಹಾಗೂ ಅದರಲ್ಲಿರುವ ನನ್ನ ಸಹಿಯನ್ನು ನಿಶಾನೆ ಪಿ-1(ಎ) ಎಂದು, ಪ್ರಕರಣಕ್ಕೆ ಸಂಬಂಧಿಸಿದ ಶೋಧನಾ ಕಾರ್ಯ ಬಗ್ಗೆ ಶೋಧನಾ ಸಮುಚಿತ ಪತ್ರವನ್ನು ನಿಶಾನೆ ಪಿ-2 ಎಂದು, ಸರ್ಚ್ ಲಿಸ್ಟ್‌ನ ಪ್ರತಿಯನ್ನು ನಿಶಾನೆ ಪಿ-3 ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-4 ಎಂದು, ಅಧಿಕೃತ ಅಧಿಕಾರಿಯವರಿಗೆ ಒಪ್ಪಿಸಿರುವ ಪ್ರತಿಯನ್ನು ನಿಶಾನೆ ಪಿ-5 ಎಂದು, ರಾಸಾಯನಿಕ ವಿಶ್ಲೇಷಕರಿಗೆ ಬರೆದ ಪತ್ರವನ್ನು ನಿಶಾನೆ ಪಿ-6 ಎಂದು, ರಾಸಾಯನಿಕ ವರದಿಯನ್ನು ನಿಶಾನೆ ಪಿ-7 ಎಂದು, ಸಾರಿಗೆ ಅಧಿಕಾರಿಗಳಿಗೆ ಬರೆದು ಪತ್ರವನ್ನು ನಿಶಾನೆ ಪಿ-8 ಎಂದು ಮತ್ತು ಸಾರಿಗೆ ಅಧಿಕಾರಿಗಳಿಂದ ಬಂದ ಪತ್ರವನ್ನು ನಿಶಾನೆ ಪಿ-9 ಎಂದು ಗುರುತಿಸಲಾಯಿತು ಎಂದು ತಮ್ಮ ಸಾಕ್ಷಿಯಲ್ಲಿ ನುಡಿದಿರುತ್ತಾರೆ.

ಸದರಿ ದಿನಾಂಕದಂದು ವಾಹನ ಮಾಲೀಕರಾಗಲೀ, ಆರೋಪಿಗಳಾಗಲೀ ಮತ್ತು ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಗೈರು ಹಾಜರಿರುವುದರಿಂದ ಪಾಟೀ ಸವಾಲು ಇಲ್ಲವೆಂದು ಈ ಪ್ರಾಧಿಕಾರವು ಪರಿಗಣಿಸಲಾಯಿತು.

**ಪ್ರಾ.ಸಾ-2:**

ಶ್ರೀ ಎನ್. ಶಿವಪ್ಪಗೌಡ ಅಬಕಾರಿ ರಕ್ಷಕ, ಪುತ್ತೂರು ಉಪ ವಿಭಾಗ ಇವರು ಈ ಮೊಕದ್ದಮೆಗೆ ಸಂಬಂಧಿಸಿ ಕೆಮಿಕಲ್ ಕ್ಯಾರಿಯರ್ ಆಗಿದ್ದು, ಇವರು ದಿನಾಂಕ: 20.04.05 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ಇವರನ್ನು ಪಿಡಬ್ಲ್ಯೂ-2 ಎಂದು ಸಾಕ್ಷಿ ಮಾಡಲಾಯಿತು. ಪ್ರಕರಣಕ್ಕೆ ಸಂಬಂಧಿಸಿದ 750 ಎಂ.ಎಲ್.ನ 3 ಸೀಸೆಗಳನ್ನು ರಾಸಾಯನಿಕ ತಜ್ಞರಿಗೆ ಒಪ್ಪಿಸಿದ್ದು, ನಂತರ ದಿನಾಂಕ: 27.11.04 ರಂದು ಪ್ರಕರಣಕ್ಕೆ ಸಂಬಂಧಿಸಿದ ರಾಸಾಯನಿಕ ವಿಶ್ಲೇಷಕರ ವರದಿ ಹಾಗೂ ಮೂರು ಖಾಲಿ 750 ಎಂ.ಎಲ್.ನ ಬಾಟಲ್‌ಗಳನ್ನು ಹಿಂದಕ್ಕೆ ಪಡೆದು ಅಬಕಾರಿ ನಿರೀಕ್ಷಕರಿಗೆ ಒಪ್ಪಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಸದರಿ ದಿನಾಂಕದಂದು ವಾಹನ ಮಾಲೀಕರಾಗಲೀ, ಆರೋಪಿಗಳಾಗಲೀ ಮತ್ತು ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಗೈರು ಹಾಜರಿರುವುದರಿಂದ ಪಾಟೀ ಸವಾಲು ಇಲ್ಲವೆಂದು ಈ ಪ್ರಾಧಿಕಾರವು ಪರಿಗಣಿಸಲಾಯಿತು.

ಈ ಪ್ರಕರಣದಲ್ಲಿ ಪ್ರಾ.ಸಾ: 1 ಮತ್ತು 2 ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನುಡಿದಿರುತ್ತಾರೆ. ಇವರು ನೀಡಿರುವ ಸಾಕ್ಷಿಗೆ ವಾಹನ ಮಾಲೀಕರಾಗಲೀ, ಆರೋಪಿಗಳಾಗಲೀ ಮತ್ತು ಅವರ ಪರ ವಕೀಲರಾಗಲಿ ಯಾವುದೇ ಪಾಟೀ ಸವಾಲು ಮಾಡಿರುವುದಿಲ್ಲ. ಇವರು ನೀಡಿರುವ ಹೇಳಿಕೆಯ ಮೇರೆಗೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 20.11.2004 ರಂದು ಪ್ರಕರಣದಲ್ಲಿ ಜಪ್ತುಪಡಿಸಿರುವ ಲಾರಿ ಸಂಖ್ಯೆ: ಟಿಎನ್-41-ಎಂ-9824 ರಲ್ಲಿ ಅಕ್ರಮವಾಗಿ ಪ್ರತ್ಯೇಕ ಟ್ಯಾಂಕನ್ನು ಅಳವಡಿಸಿ ಕಳ್ಳ ಸಾಗಾಣಿಕೆಯಲ್ಲಿ ಮದ್ಯಸಾರವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದು ಖಚಿತವಾಗಿರುತ್ತದೆ. ಸ್ಥಳದಲ್ಲಿಯೇ ಮದ್ಯಸಾರವನ್ನು ಹಾಗೂ ವಾಹನವನ್ನು ವಶಪಡಿಸಿಕೊಂಡು ತಯಾರಿಸಿರುವ ಸ್ಥಳ, ಮಹಜರ್ ಹಾಗೂ ಸಾಕ್ಷಿಗಳ ಹೇಳಿಕೆಯಿಂದ ಸಾಬೀತಾಗಿದ್ದು, ಅಕ್ರಮ ಸಾಗಾಣಿಕೆಯಲ್ಲಿ ವಶಪಡಿಸಿಕೊಳ್ಳಲಾಗಿರುವ ವಾಹನ ಲಾರಿ ಸಂಖ್ಯೆ: ಟಿಎನ್-41-ಎಂ-9824 ನ್ನು ಉಪಯೋಗಿಸಿರುವುದು ನಿಸ್ಸಂದೇಹವಾಗಿ ಕಂಡು ಬರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮವೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿಯನ್ನು ಸುಮಾರು 6 ತಿಂಗಳು ಕಳೆದಿದ್ದರೂ ಈ ಪ್ರಾಧಿಕಾರದ ಮುಂದೆ ವಾಹನದ ಮಾಲೀಕತ್ವದ ಬಗ್ಗೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ವಶಪಡಿಸಿಕೊಂಡ ಲಾರಿಗೆ ನಕಲಿ ನಂಬರನ್ನು ಅಳವಡಿಸಿ ಹಾಗೂ ಲಾರಿಯಲ್ಲಿ ಪ್ರತ್ಯೇಕ ಟ್ಯಾಂಕನ್ನು ನಿರ್ಮಿಸಿ ಅದರಲ್ಲಿ ಮದ್ಯಸಾರವನ್ನು ಸಂಗ್ರಹಿಸಿ ಕಳ್ಳ ಸಾಗಾಣಿಕೆಯಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡಿರುವುದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಾಲಂ 11, 12ರ ಪ್ರಕಾರ ಅಪರಾಧವಾಗಿದ್ದು, ಕಾಲಂ 32, 34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಅಕ್ರಮವಾಗಿ ಮದ್ಯಸಾರವನ್ನು ಲಾರಿಯಲ್ಲಿ ಸಾಗಾಣಿಕೆ ಮಾಡಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಬಿಡುಗಡೆಯಾದ ಆರೋಪಿಗಳಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ,

ಸದರಿ ಅಪರಾಧವು ನನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಬೀತುಪಡಿಸಿರುವುದಿಲ್ಲ. ಅಭಿಯೋಜನ ಪರ ಸಾಕ್ಷಿದಾರರಿಗೆ ಯಾವುದೇ ಪಾಟೀ ಸವಾಲು ಮಾಡಿರುವುದಿಲ್ಲ. ಈ ಕಾರಣಗಳಿಂದ 2ನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ, ಜಪ್ತಾದ ವಾಹನವನ್ನು ಮತ್ತು ಮದ್ಯಸಾರವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ನಿರ್ಧಾರಕ್ಕೆ ಬಂದು ಈ ಪ್ರಾಧಿಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿ ಆದೇಶಿಸಿದೆ.

**ಆದೇಶ**

ಎನ್. ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಮೊಕದ್ದಮೆ ಸಂಖ್ಯೆ: 11/2004-05 ದಿನಾಂಕ:20.11.2004 ರಂದು ಜಪ್ತುಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಟಿಎನ್-41-ಎಂ-9824 (ನಕಲಿ ನೋಂದಣಿ ಸಂಖ್ಯೆ) ಯನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 16.05.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ:1 - ಶ್ರೀ ಎನ್. ನಾರ್ಣಪ್ಪ ನಾಯ್ಕ್, ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು

ಪ್ರಾ.ಸಾ:2 - ಶ್ರೀ ಎನ್. ಶಿವಪ್ಪಗೌಡ, ಅಬಕಾರಿ ರಕ್ಷಕ, ಪುತ್ತೂರು ಉಪ ವಿಭಾಗ, ಪುತ್ತೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಸ್ಥಳದಲ್ಲಿ ತಯಾರಿಸಿದ ಮಹಜರಿನ ಛಾಯಾ ಪ್ರತಿ.
ನಿಶಾನೆ ಪಿ-1(ಎ) - ಅದರಲ್ಲಿರುವ ತನ್ನ ಸಹಿ.
ನಿಶಾನೆ ಪಿ-2 - ಶೋಧನಾ ಸಮುಚಿತ ಪತ್ರ.
ನಿಶಾನೆ ಪಿ-3 - ಸ್ಥಳದಲ್ಲಿಯೇ ತಯಾರಿಸಿರುವ ಸರ್ಚ್‌ಲಿಸ್ಟ್.
ನಿಶಾನೆ ಪಿ-4 - ಪ್ರಥಮ ಮಾಹಿತಿ ವರದಿಯ ಛಾಯಾ ಪ್ರತಿ.
ನಿಶಾನೆ ಪಿ-5 - ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಿದ ವರದಿ
ನಿಶಾನೆ ಪಿ-6 - ರಾಸಾಯನಿಕ ವಿಶ್ಲೇಷಕರಿಗೆ ಕಳುಹಿಸಿ ಕೊಟ್ಟಿರುವ ವರದಿ
ನಿಶಾನೆ ಪಿ-7 - ರಾಸಾಯನಿಕ ವಿಶ್ಲೇಷಕರ ವರದಿ
ನಿಶಾನೆ ಪಿ-8 - ಆರ್.ಟಿ.ಓ. ಕೊಯಮತ್ತೂರು ಇವರಿಗೆ ಬರೆದ ಪತ್ರ
ನಿಶಾನೆ ಪಿ-9 - ಸಾರಿಗೆ ಅಧಿಕಾರಿಯವರಿಂದ ಬಂದ ಹಿಂಬರಹ ಪತ್ರ

**ಅನುಬಂಧ-3**

**ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

-ಯಾವುದೂ ಇರುವುದಿಲ್ಲ-

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

-ಯಾವುದೂ ಇರುವುದಿಲ್ಲ-

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಪಿ.ಆರ್.803 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## G. R. STEELS AND ALLOYS PRIVATE LIMITED
## K.R. Puram, Whitefield Road, Bangalore- 560 066
## NOTICE

Notice is hereby given that the members of G.R. Steels & Alloys Private Limited at their Extra Ordinary General Meeting held on Monday the 30th May, 2005 at 11.00 am at its Registered Office at K.R. Puram, Whitefield Road, Bangalore-560 066 have passed the following special resolution to wind up the above Company voluntarily.

"RESOLVED THAT, pursuant to the provisions of Section 484 (1)(b) of the Companies Act, the consent of the members be and is hereby accorded that the Company be wound up voluntarily and that Mr. A.K. Wadhera, Director of the Company, be and is hereby appointed as liquidator of the Company with all the powers under section 512 read with section 457 of the Companies Act, 1956 for the purpose

of winding up the affairs and distribution of the assets of the Company and that the remuneration of Mr. A.K. Wadhera be fixed at a sum of Rs. 10,000/- in addition to his costs, charges and expenses."

For G.R. Steels & Alloys Private Limited
**A. K. Wadhera**
Director/Liquidator

**FORM No. 151**
**(See Rule 315)**
**The Companies Act, 1956**
**Member's Voluntary winding up**
**(Notice of appointment of liquidator Pursuant to Section 516)**

| | | |
|---|---|---|
| Name of the Company | : | G. R. Steels & Alloys Private Limited |
| Nature of business | : | Manufacturing Steel re-rolling and Alloys. |
| Registered Office Address | : | K. R. Puram, Whitefield Road, Whitefield, Bangalore-560 066 |
| Name(s) and address(es) of Liquidator(s) | : | Mr. A. K. Wadhera, 3633/A, Service Road, 18th Main Road, HAL II Stage, Bangalore-560 008 |
| Date of appointment | : | 30th May, 2005 |
| By whom appointed | : | Members of the Company |

Dated the 30th May 2005

For G.R. Steels & Alloys Private Limited
PD-45 **A. K. Wadhera**
Director/Liquidator

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ನಡವಳಿಗಳು

**ವಿಷಯ :** ಶ್ರೀ ಕೆ. ಪುಟ್ಟಸ್ವಾಮಿ, ಗ್ರೂಪ್ 'ಡಿ' ನೌಕರರು, ಚೆಲುವಾಂಬ ಆಸ್ಪತ್ರೆ, ಇವರು ಹಿಂದೆ ಸರ್ಕಾರಿ ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ಅಶಿಸ್ತು: ಕರ್ತವ್ಯಲೋಪದ ಆರೋಪದ ಬಗ್ಗೆ ಅಂತಿಮ ಆದೇಶ.

**ಉಲ್ಲೇಖ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಎನ್ (3): ಸಿಆರ್:63: 01-02 ದಿನಾಂಕ: 4.10.02.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(5): ಸಿಆರ್:63:01-02 ಬೆಂಗಳೂರು ದಿನಾಂಕ: 22.12.01.
3. ವಿಚಾರಣಾ ವರದಿಯ ಸಂಖ್ಯೆ: ವಿಅ ವಿಚಾರಣೆ: ಎನ್‌ಜಿ:246: 02-03 ದಿನಾಂಕ: 16.07.04.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಪತ್ರ ಸಂಖ್ಯೆ: ಡಿಪಿಎನ್ (5): ಸಿಆರ್:63: 01-02 ದಿನಾಂಕ: 31.07.04.
5. ನೌಕರರ ಲಿಖಿತ ಅಹವಾಲು ದಿನಾಂಕ: 12.04.05.

**ಪ್ರಸ್ತಾವನೆ:**

ಶ್ರೀ ಕೆ. ಪುಟ್ಟಸ್ವಾಮಿ, ಡಿ ದರ್ಜೆ ನೌಕರರು, ಸರ್ಕಾರಿ ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರಿ ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಮೈಸೂರು ಇಲ್ಲಿನ ವೈದ್ಯಾಧಿಕಾರಿ: ಜಿಲ್ಲಾ ಶಸ್ತ್ರ ಚಿಕಿತ್ಸಕರು ನೀಡಿರುವ ಅರೆ ಸರ್ಕಾರಿ ಪತ್ರ ಸಂಖ್ಯೆ:ಇಡಿಹೆಚ್:166: 01-02, ದಿನಾಂಕ: 10.12.01 ರಲ್ಲಿನ ವರದಿಯಂತೆ ಶ್ರೀ ಕೆ. ಪುಟ್ಟಸ್ವಾಮಿಯವರು, ಗ್ರೂಪ್ 'ಡಿ' ನೌಕರರಾಗಿ 10 ವರ್ಷಗಳಿಂದ ಕರ್ತವ್ಯದಲ್ಲಿದ್ದು ದೈನಂದಿನ ಕಾರ್ಯ ನಿರ್ವಹಣೆಯಲ್ಲಿ ಅಶಿಸ್ತು, ಕರ್ತವ್ಯ ಲೋಪ, ದುರ್ನಡತೆಗಳನ್ನು ಪ್ರದರ್ಶಿಸುತ್ತಿರುವುದಾಗಿ ಹಾಗೂ ಇವರು ಮೇಲಾಧಿಕಾರಿಗಳ ಆದೇಶಗಳನ್ನು ನಿರ್ಲಕ್ಷ್ಯದಿಂದ ಪರಿಗಣಿಸಿ ರೋಗಿಗಳೊಂದಿಗೆ ಸಹೋದ್ಯೋಗಿಗಳೊಂದಿಗೆ ಜಗಳವಾಡುವ ಮತ್ತು ತಮ್ಮ ಬೇಡಿಕೆಗಳು ತಮ್ಮ ಇಚ್ಛಾನುಸಾರ ಈಡೇರದ ಸಂದರ್ಭಗಳಲ್ಲಿ ಅಧಿಕಾರಿಗಳೊಂದಿಗೂ ಅಶಿಸ್ತಿನಿಂದ ವರ್ತಿಸುವುದಲ್ಲದೆ, ವೈದ್ಯಾಧಿಕಾರಿಯವರಿಗೂ ಜೀವ ಬೆದರಿಕೆಯನ್ನು ಒಡ್ಡಿ ತಮ್ಮ ಚಟುವಟಿಕೆಗಳಿಗೆ ಅಡ್ಡಿಪಡಿಸಲಾಗಿದೆಯೆಂದೂ, ಈ ಬಗ್ಗೆ ಕಛೇರಿಯ ಮುಖ್ಯಸ್ಥರು ಎಚ್ಚರಿಕೆ ನೀಡಿದಾಗ್ಯೂ ಸಹ ನೌಕರರು ತಮ್ಮ ದುರ್ನಡತೆಯಿಂದ ಹಿಂದೆ ಸರಿಯದೆ ಹಾಜರಾತಿ ಪುಸ್ತಕವನ್ನು; ಕಛೇರಿಯ ದಾಖಲೆಗಳನ್ನು ತಿದ್ದುವುದು, ಈ ರೀತಿಯ ದುರ್ವ್ಯವಹಾರದಲ್ಲಿ ತೊಡಗುತ್ತಿದ್ದು, ಈ ಬಗ್ಗೆ ಆಗ್ಗಿಂದಾಗ್ಗೆ ಮೆಮೋಗಳನ್ನು ಜಾರಿಗೊಳಿಸಲಾಗಿ ಮೆಮೋಗಳನ್ನು ನಿರಾಕರಿಸುವುದು ಹಾಗೂ ಸಮಜಾಯಿಷಿ ನೀಡದಿರುವ ಬಗ್ಗೆ ಉಲ್ಲೇಖ(1)ರಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣೆ ಪಟ್ಟಿಯನ್ನು ಜಾರಿಗೊಳಿಸಿದ್ದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸದಿದ್ದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಉಲ್ಲೇಖ (2) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಉಲ್ಲೇಖ(3) ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ ಉಲ್ಲೇಖ(5)ರಲ್ಲಿ ನೌಕರರು ತಮ್ಮ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲಿನಲ್ಲಿ ನೌಕರರು ತಪ್ಪನ್ನು ಒಪ್ಪಿಕೊಂಡಿಲ್ಲವಾದ ಕಾರಣ ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನೌಕರರ ಮೇಲಿನ ಆರೋಪಗಳು ದೃಢಪಟ್ಟಿರುವುದಾಗಿ ತಿಳಿಸಿರುವುದರಿಂದ, ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(5): ಸಿಆರ್:63:01-02 ದಿನಾಂಕ: 20ನೇ ಮೇ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮೊಹಮ್ಮದ್‌ಸಹಾವುಲ್ಲ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಆದ ನಾನು ಶ್ರೀ ಕೆ. ಪುಟ್ಟಸ್ವಾಮಿ 'ಡಿ' ದರ್ಜೆ ನೌಕರರು ಹಾಲಿ ಚೆಲುವಾಂಬ ಆಸ್ಪತ್ರೆ, ಮೈಸೂರು ಇವರು ಸರ್ಕಾರಿ ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಅಶಿಸ್ತು ಹಾಗೂ ಕರ್ತವ್ಯಲೋಪದ ಮೇಲೆ ಅಮಾನತ್ತಿನಲ್ಲಿಟ್ಟ ಅವಧಿ ದಿನಾಂಕ: 2.1.2002 ರಿಂದ ದಿನಾಂಕ: 22.11.2002 ರವರೆಗಿನ ಅವಧಿಯನ್ನು ಅಮಾನತ್ತಿನಲ್ಲಿ ಕಳೆದ ಅವಧಿಯೆಂದು ಪರಿಗಣಿಸಿದ್ದೇನೆ, ಹಾಗೂ ದಂಡನೆಯಾಗಿ ಕೆಸಿಎಸ್ (ಸಿಸಿಎ) ನಿಯಮ 8(6)ರ ಪ್ರಕಾರ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದ್ದೇನೆ.

**ಮೊಹಮದ್ ಸನಾವುಲ್ಲ**

ಪಿ.ಆರ್.804

ಆಯುಕ್ತರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ನಡವಳಿಗಳು ಬೆಂಗಳೂರು.

**ವಿಷಯ :** ಶ್ರೀ ವಿ. ಸಿ. ಕಲ್ಮಠ, ಪ್ರಥಮ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ ಇಂಗಳಗಿ ಇವರ ಅನಧಿಕೃತ ಗೈರುಹಾಜರಿ ಆರೋಪ ಕುರಿತು ಇಲಾಖಾ ವಿಚಾರಣೆ ಅಂತಿಮ ಆದೇಶ.

**ಉಲ್ಲೇಖ :**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್(13) ಸಿಆರ್:40-01-02, ದಿನಾಂಕ: 23.11.2001.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 20.2.2002.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ: ಡಿಪಿಎನ್ (13) ಸಿಆರ್ 40-01-02, ದಿನಾಂಕ: 28.05.2002.
4. ವಿಚಾರಣಾ ವರದಿಯ ಸಂಖ್ಯೆ: ಮುಜಾಅ: ಜಾಕೋ: ಎನ್‌ಜಿ: 62-01-02, ದಿನಾಂಕ: 1.05.2003.
5. ವಿಚಾರಣಾ ವರದಿ ನೌಕರರಿಗೆ ಜಾರಿಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(13)ಸಿಆರ್ 40-01-02, ದಿನಾಂಕ: 24.07.03.
6. ನೌಕರರ ಲಿಖಿತ ಅಹವಾಲು ದಿನಾಂಕ: 17.01.05.

**ಪ್ರಸ್ತಾವನೆ:**

ಶ್ರೀ ವಿ. ಸಿ. ಕಲ್ಮಠ, ಪ್ರಥಮ ದರ್ಜೆ ಸಹಾಯಕರು, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಇಂಗಳಗಿ, ಧಾರವಾಡ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 11.9.99 ರಿಂದ ಇಲ್ಲಿಯ ವರೆಗೆ ಅನಧಿಕೃತ ಗೈರುಹಾಜರಿಯಾದ ಆರೋಪದ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ(2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು, ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ(3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಗೃತಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನು ಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (13) ಸಿಆರ್ 40-2001-02, ಬೆಂಗಳೂರು, ದಿನಾಂಕ: 23ನೇ ಮೇ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೊಹಮ್ಮದ್ ಸನಾವುಲ್ಲ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರು, ಆದ ನಾನು ಶ್ರೀ ವಿ. ಸಿ. ಕಲ್ಮಠ, ಪ್ರಥಮ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಇಂಗಳಗಿ, ಧಾರವಾಡ ಜಿಲ್ಲೆ, ಇವರು ದಿನಾಂಕ: 11.9.1999 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುವ ಆರೋಪವು ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಿದ್ದೇನೆ.

**ಮೊಹಮದ್ ಸನಾವುಲ್ಲ**

ಪಿ.ಆರ್.805

ಆಯುಕ್ತರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಕಾರ್ಯಾಲಯದ ನಡವಳಿಗಳು ಬೆಂಗಳೂರು.

**ವಿಷಯ :** ಶ್ರೀ ನಾಗಪ್ಪ ಓ. ಮಾದರ, ಸ್ಯಾನಿಟರಿ ವರ್ಕರ್, ಇವರ ಅನಧಿಕೃತ ಗೈರುಹಾಜರಿ ಆರೋಪದ ಬಗ್ಗೆ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಉಲ್ಲೇಖ :**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ:ಡಿಪಿಎನ್(13)ಸಿಆರ್:74-01-02, ದಿನಾಂಕ: 17.07.2002.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್ (13): ಸಿಆರ್ 74: 01-02, ದಿನಾಂಕ: 12.12.02.
3. ವಿಚಾರಣಾ ವರದಿಯ ಸಂಖ್ಯೆ: ಮುಜಾಅ: ಜಾಕೋ: ಎನ್‌ಜಿ: 189-02-03, ದಿನಾಂಕ: 20.08.2004.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್: 13:ಸಿಆರ್:74: 01-02, ದಿನಾಂಕ: 25.10.04.

**ಪ್ರಸ್ತಾವನೆ:**

ಶ್ರೀ ನಾಗಪ್ಪ ಓ. ಮಾದರ, ಸ್ಯಾನಿಟರಿ ವರ್ಕರ್, ಇವರು ಹಿಂದೆ ಕರ್ನಾಟಕ ವೈದ್ಯಕೀಯ ವಿಜ್ಞಾನ ಸಂಸ್ಥೆ, ಹುಬ್ಬಳ್ಳಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 1.3.97 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾದ ಆರೋಪದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ತಮ್ಮ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ. ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗ್ರತ ಅಧಿಕಾರಿಗಳು (ಜಾಗ್ರತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (3)ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದು, ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:13:ಸಿಆರ್:74:2001-02, ಬೆಂಗಳೂರು ದಿನಾಂಕ: 24ನೇ ಮೇ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಪಾರ್ವತಿ ವಿ. ನಾಗರಾಳೆ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ನಾಗಪ್ಪ ಓ. ಮಾದರ, ಸ್ಯಾನಿಟರಿ ವರ್ಕರ್, ಕಿಮ್ಸ್, ಹುಬ್ಬಳ್ಳಿ ಇವರು ದಿನಾಂಕ: 1.3.97 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುವ ಆರೋಪವು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ದಂಡನೆಯಾಗಿ ಸದರೀ ನಿಯಮ 8(viii) ರ ಪ್ರಕಾರ ಈ ಕೂಡಲೇ ಜಾರಿಗೆ ಬರುವಂತೆ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.806

**ಡಾ: ಪಾರ್ವತಿ ವಿ. ನಾಗರಾಳೆ**

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪ್ರಕರಣ ಸಂಖ್ಯೆ: ಕಾಪಕ:ಕಸ:25:05 ದಿನಾಂಕ: 30ನೇ ಮೇ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ರತ್ನ ಅಲಿಯಾಸ್ ನಾಗರತ್ನ ಕೋಂ ದಿ: ಈಶ್ವರ,
2. ಕಾವ್ಯ ಬಿನ್ ದಿ: ಈಶ್ವರ
3. ಕಾರ್ತಿಕ್ ಬಿನ್ ದಿ: ಈಶ್ವರ

**ಇವರುಗಳ ವಿಳಾಸ:**
ಗುಳ್ಳೆಕೊಪ್ಪ ಗ್ರಾಮ, ಭೀಮನಕೆರೆ ಅಂಚೆ
ಹೊಸನಗರ ತಾ:

1. ಜನರಲ್ ಮ್ಯಾನೇಜರ್ ಹೆಚ್. ಆರ್. ಡಿ. ಎ. ಮೈಸೂರು ಪೇಪರ್ ಮಿಲ್ಸ್ ಪೇಪರ್ ಟೌನ್ ಭದ್ರಾವತಿ.
2. ಬ್ರಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಬ್ರಾಂಚ್ ಆಫೀಸ್ ಜುಬೇದಾ ಬಿಲ್ಡಿಂಗ್, 3ನೇ ಕ್ರಾಸ್, ನೆಹರು ರಸ್ತೆ, ಶಿವಮೊಗ್ಗ ನಗರ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಈಶ್ವರ ರವರು ಪ್ರತಿವಾದಿಯವರಲ್ಲಿ ವಾಚರ್ ಆಗಿ ಕೆಲಸದ ಮೇಲೆ ಇದ್ದಾಗ 25.1.02 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 16.05.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.807

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ನ್ಯಾಯಾಲಯ ವ ಕಾರ್ಮಿಕ ಅಧಿಕಾರಿ ಉಪ ವಿಭಾಗ-1 ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-38:2005 ದಿನಾಂಕ: 21ನೇ ಮೇ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ದಾನಪ್ಪ ಪರಸಪ್ಪ ಬಿರುಣಗಿ ಸಾ: ರೇವತಗಾಂವ ತಾ: ಇಂಡಿ ಜಿ: ವಿಜಾಪುರ ಹಾಗೂ ಇತರರು.

1. ಶಿವರತ್ನ ಕನ್ಸಟ್ರಕ್ಷನ್ ಕಂ. ಲಿ., ಅಕ್ಲುಜ್ ಇಂಜಿನಿಯರ್ಸ್ ಅಂಡ್ ಗವರ್ನಮೆಂಟ್ ಕಾಂಟ್ರಾಕ್ಟರ್ಸ್, ಶಂಕರ ನಗರ, ಅಕ್ಲುಜ್ ತಾ: ಮೆಲಸೀರಿಜ್ ಜಿ: ಸೋಲಾಪುರ.
2. ರಿಲಾಯನ್ಸ್ ಇನ್ಸೂರೆನ್ಸ್ ಕಂ.ಲಿ., ಅಕ್ಲುಜ್ ಬ್ರ್ಯಾಂಚ್ ಅಕ್ಲುಜ್ ತಾ: ಮಲಸೀರಿಜ್ ಜಿ: ಸೋಲಾಪುರ
3. ಸೂರ್ಯಕಾಂತ ಎಸ್. ಶೇಗಡೆ, ಪೊ: ವಾಗೋಳಿ ತಾ: ಮಲಸೀರಿಜ್, ಜಿ: ಸೋಲಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀಮತಿ ಯಲ್ಲವ್ವ ಗಂಡ ದಾನಪ್ಪ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 18.12.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ. ಡಿ. ಇಂಡಿ**

ಪಿ.ಆರ್.808

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ ವ ಕಾರ್ಮಿಕ ಅಧಿಕಾರಿ ಉಪ ವಿಭಾಗ-1
## ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-39:2005 ದಿನಾಂಕ: 21ನೇ ಮೇ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:

1. ರಾಮಚಂದ್ರ ದವಲಪ್ಪಾ ಕನಕೇನವರ ಸಾ: ರೇವತಗಾಂವ ತಾ: ಇಂಡಿ ಜಿಲ್ಲೆ: ಸೋಲಾಪುರ. ಹಾಗೂ ಇತರರು.

ಪ್ರತಿವಾದಿಗಳು:

1. ರಾಮಚಂದ್ರ ದವಲಪ್ಪ ಕನಕೇನವರ ಸಾ: ರೇವತಗಾಂವ ತಾ: ಇಂಡಿ ಜಿಲ್ಲೆ: ಸೋಲಾಪುರ.
2. ರಿಲಾಯನ್ಸ್ ಇನ್ಶೂರೆನ್ಸ್ ಕಂ.ಲಿ., ಅಕ್ಲುಜ ತಾ: ಮಲಸೀರಿಜ್ ಜಿಲ್ಲೆ: ಸೋಲಾಪುರ.
3. ಸೂರ್ಯಕಾಂತ ಎಸ್. ಶೇಗಡೆ ಸಾ: ವಾಗೋಳಿ ತಾ: ಮಲಸೀರಿಜ್, ಜಿ: ಸೋಲಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸಂತ್ರಾಮ ರಾಮಚಂದ್ರ ಕನಕೇನವರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 18.12.2005 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ. ಡಿ. ಇಂಡಿ**

ಪಿ.ಆರ್.809

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ ವ ಕಾರ್ಮಿಕ ಅಧಿಕಾರಿ ಉಪ ವಿಭಾಗ-1
## ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-40:2005 ದಿನಾಂಕ: 21ನೇ ಮೇ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:

1. ಕು: ಪರಶುರಾಮ ಸಂತ್ರಾಮ ಕನಕೇನವರ, ಅಪ್ರಾಪ್ತ ಅಜ್ಞಾನಪಾಲನಕರ್ತ ಶ್ರೀಮತಿ ಸರಸ್ವತಿ ಗಂಡ ರಾಮಚಂದ್ರ ಕನಕೇನವರ ಸಾ: ರೇವತಗಾಂವ ತಾ: ಇಂಡಿ ಜಿ: ವಿಜಾಪುರ ಹಾಗೂ ಇತರರು.

ಪ್ರತಿವಾದಿಗಳು:

1. ಶಿವರತ್ನ ಕನ್ಸ್ಟ್ರಕ್ಷನ್ಸ್ ಕಂ.ಲಿ., ಅಕ್ಲುಜ್ ಇಂಜಿನಿಯರ್ಸ್ ಅಂಡ್ ಗವರ್ನ್‌ಮೆಂಟ್ ಕಾಂಟ್ರಾಕ್ಟರ್ಸ್, ಶಂಕರ ನಗರ ಅಕ್ಲುಜ್ ಜಿ: ಸೋಲಾಪುರ.
2. ರಿಲಾಂಯನ್ಸ್ ಇನ್ಶೂರನ್ಸ್ ಕಂ.ಲಿ., ಅಕ್ಲುಜ್ ತಾ: ಮಲಸೀರಿಜ್ ಜಿ: ಸೋಲಾಪುರ.
3. ಸೂರ್ಯಕಾಂತ ಎಸ್. ಶೇಗಡೆ ಸಾ: ವಾಗೋಳಿ ತಾ: ಮಲಸೀರಿಜ್, ಜಿ: ಸೋಲಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀಮತಿ ಸತ್ತೇವ್ವ ಗಂಡ ಸಂತ್ರಾಮ ಕನಕೇನವರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 18.12.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ

ಅವಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

ಎಂ. ಡಿ. ಇಂಡಿ

ಪಿ.ಆರ್.810 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ ವ ಕಾರ್ಮಿಕ ಅಧಿಕಾರಿ ಉಪ ವಿಭಾಗ-1 ವಿಜಾಪುರ ಜಿಲ್ಲೆ ವಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-41:2005 ದಿನಾಂಕ: 21ನೇ ಮೇ 2005**

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು:**

1. ಔಡುಸಿದ್ದ ಉರ್ಫ ಲೋಕೇಶ್ ತಂದೆ ತಿಪ್ಪಣ್ಣ ಹಾದಿಮನಿ ಸಾ: ಮಕಣಾಪುರ ತಾ: ಜಿ: ವಿಜಾಪುರ ಹಾಗೂ ಇತರರು.

1. ಶಿವರತ್ನ ಕನ್ಸ್‌ಟ್ರಕ್ಷನ್ಸ್ ಕಂ.ಲಿ., ಅಕ್ಲುಜ್ ಇಂಜಿನಿಯರ್ಸ್ ಅಂಡ್ ಗವರ್ನಮೆಂಟ್ ಕಾಂಟ್ರಾಕ್ಟರ್ಸ್, ಶಂಕರ ನಗರ, ಅಕ್ಲುಜ್ ಜಿ: ಸೋಲಾಪುರ.
2. ರಿಲಾಯನ್ಸ್ ಇನ್ಸೂರೆನ್ಸ್ ಕಂ.ಲಿ., ಅಕ್ಲುಜ್ ತಾ: ಮಲಸೀರಿಜ್ ಜಿ: ಸೋಲಾಪುರ.
3. ಸೂರ್ಯಕಾಂತ ಎಸ್. ಶೆಗಡೆ ಸಾ: ವಾಗೋಳಿ ತಾ: ಮಲಸೀರಿಜ್, ಜಿ: ಸೋಲಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀಮತಿ ಸಂಗೀತಾ ಹಾದಿಮನಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 18.12.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

ಎಂ. ಡಿ. ಇಂಡಿ

ಪಿ.ಆರ್.811 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ ವ ಕಾರ್ಮಿಕ ಅಧಿಕಾರಿ ಉಪ ವಿಭಾಗ-1 ವಿಜಾಪುರ ಜಿಲ್ಲೆ ವಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-31:2005 ದಿನಾಂಕ: 5ನೇ ಮೇ 2005**

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಮಹಾದೇವಿ ಗಂಡ ಈರಸಂಗಪ್ಪ ಹಾಲಕುಡೆ, ಸಾ: ಬಿಜ್ಜರಗಿ ತಾ: ಜಿ: ವಿಜಾಪುರ ಹಾಗೂ ಇತರರು.

1. ಸೋಮಪ್ಪ ತಂದೆ ಬಸಪ್ಪ ಸಜ್ಜನ ಸಾ: ಮಠಪತಿ ಗಲ್ಲಿ, ವಿಜಾಪುರ.
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್, ಕಂ.ಲಿ., ವಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಈರಪ್ಪ ಉರ್ಫ ರವಿ ಈರಸಂಗಪ್ಪ ಹಾಲಕುಡೆ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 5.12.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

ಎಂ. ಡಿ. ಇಂಡಿ

ಪಿ.ಆರ್.812 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-1, ವಿಜಾಪುರ.

## ಕಂದಾಯ ಇಲಾಖೆ

**ಅಧಿಸೂಚನೆ ಸಂಖ್ಯೆ: ಕಂಇ 37 ಮುನೋಸೇ (2) 2005 ಬೆಂಗಳೂರು, ದಿನಾಂಕ: 25ನೇ ಮೇ 2005**

ಕರ್ನಾಟಕ ಚುನಾವಣಾ ಆಯೋಗದ ಚುನಾವಣಾ ನೀತಿ ಸಂಹಿತೆಯ ಪ್ರಕಾರ ಶಿವಮೊಗ್ಗ, ದಾವಣಗೆರೆ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿನ ಅಧಿಕಾರಿ ನೌಕರರುಗಳ ವರ್ಗಾವಣೆಯನ್ನು ತಡೆಹಿಡಿಯಬೇಕಿರುತ್ತದೆ. ಆದ್ದರಿಂದ ದಿನಾಂಕ: 19.05.2005ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 34 ಮುನೋಸೇ (2) 2005ರಲ್ಲಿ ಮಾಡಲಾಗಿರುವ ವರ್ಗಾವಣೆಯಲ್ಲಿನ ಈ ಕೆಳಕಂಡ ಉಪ ನೋಂದಣಾಧಿಕಾರಿಗಳ ವರ್ಗಾವಣೆಯನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

| ಕ್ರಮ ಸಂಖ್ಯೆ | ನೌಕರರ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿ ನೇಮಿಸಲಾಗಿರುವ ಸ್ಥಳ |
|---|---|---|
| 1. | ಡಿ. ಉಮಾಶಂಕರಸ್ವಾಮಿ, ಉಪ ನೋಂದಣಿ ಕಛೇರಿ, ಬೆಂಗಳೂರು ದಕ್ಷಿಣ, ಬೆಂಗಳೂರು | ಉಪ ನೋಂದಣಿ ಕಛೇರಿ, ಕೆಂಗೇರಿ (ಶ್ರೀ ಎಸ್. ಆರ್. ವಸಂತಕುಮಾರ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 2. | ಎಸ್. ಆರ್. ವಸಂತಕುಮಾರ್, ಉಪ ನೋಂದಣಿ ಕಛೇರಿ, ಕೆಂಗೇರಿ | ಉಪ ನೋಂದಣಿ ಕಛೇರಿ, ಬೆಂಗಳೂರು ದಕ್ಷಿಣ (ಶ್ರೀ ಉಮಾಶಂಕರಸ್ವಾಮಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 3. | ಅರುಣ ಕಲಗುಜ್ಜಿಕರ್, ಉಪ ನೋಂದಣಿ ಕಛೇರಿ, ಕೆ.ಆರ್.ಪುರಂ. ಬೆಂಗಳೂರು | ಉಪ ನೋಂದಣಿ ಕಛೇರಿ, ಬೆಂಗಳೂರು ದಕ್ಷಿಣ (ಶ್ರೀ ಎನ್.ಎಸ್. ಕೃಷ್ಣಮೂರ್ತಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 4. | ಎನ್. ಎಸ್. ಕೃಷ್ಣಮೂರ್ತಿ, ಉಪ ನೋಂದಣಿ ಕಛೇರಿ, ಬೆಂಗಳೂರು, ದಕ್ಷಿಣ ಬೆಂಗಳೂರು. | ಉಪ ನೋಂದಣಿ ಕಛೇರಿ, ಕೆ.ಆರ್. ಪುರಂ ಬೆಂಗಳೂರು (ಶ್ರೀ ಅರುಣ ಕಲಗುಜ್ಜಿಕರ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 5. | ಮಹದೇವಯ್ಯ ಉಪ ನೋಂದಣಿ ಕಛೇರಿ ಕೆ.ಆರ್.ಪುರಂ., ಬೆಂಗಳೂರು | ಉಪ ನೋಂದಣಿ ಕಛೇರಿ, ಕೆ.ಆರ್.ಪೇಟೆ (ಶ್ರೀ ಎನ್.ಶಿವಶಂಕರ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 6. | ಎನ್. ಶಿವಶಂಕರ್, ಉಪ ನೋಂದಣಿ ಕಛೇರಿ, ಕೆ.ಆರ್.ಪೇಟೆ. | ಉಪ ನೋಂದಣಿ ಕಛೇರಿ, ಕೆ.ಆರ್.ಪುರಂ ಬೆಂಗಳೂರು (ಶ್ರೀ ಮಹದೇವಯ್ಯ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 7. | ಬಿ. ಎಸ್. ವರದರಾಜನ್, ಉಪ ನೋಂದಣಿ ಕಛೇರಿ, ಕೆಂಗೇರಿ. | ಉಪ ನೋಂದಣಿ ಕಛೇರಿ, ಬೆಂಗಳೂರು ದಕ್ಷಿಣ (ಶ್ರೀ ಪಿ. ವಿ. ವೀರರಾಜೇ ಅರಸ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 8. | ಪಾಂಡುರಂಗ ಅತ್ತಾವರ್, ಉಪ ನೋಂದಣಿ ಕಛೇರಿ, ಆನೇಕಲ್ | ಉಪ ನೋಂದಣಿ ಕಛೇರಿ, ಕೆಂಗೇರಿ, (ಶ್ರೀ ಬಿ. ಎಸ್. ವರದರಾಜನ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 9. | ಎ. ರಮೇಶ್ ಬಾಬು, ಉಪ ನೋಂದಣಿ ಕಛೇರಿ, ಹೊಸದುರ್ಗ | ಉಪ ನೋಂದಣಿ ಕಛೇರಿ, ಆನೇಕಲ್ (ಶ್ರೀ ಪಾಂಡುರಂಗ ಅತ್ತಾವರ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 10. | ಪಿ. ರಘುರಾಮ, ಉಪ ನೋಂದಣಿ ಕಛೇರಿ, ತೀರ್ಥಹಳ್ಳಿ | ಉಪ ನೋಂದಣಿ ಕಛೇರಿ, ಬ್ರಹ್ಮಾವರ (ಶ್ರೀ ಜನಾರ್ಧನ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 11. | ಎಂ. ಕೆ. ಶಾಂತಮೂರ್ತಿ, ಉಪ ನೋಂದಣಿ ಕಛೇರಿ, ಮೈಸೂರು ದಕ್ಷಿಣ, ಮೈಸೂರು. | ಉಪ ನೋಂದಣಿ ಕಛೇರಿ, ರಾಮನಗರಂ (ಶ್ರೀ ಸಿ.ಜೆ. ಪ್ರಭಾಕರ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 12. | ಶ್ರೀ ಸಿ. ಜೆ. ಪ್ರಭಾಕರ್, ಉಪ ನೋಂದಣಿ ಕಛೇರಿ, ರಾಮನಗರ | ಉಪ ನೋಂದಣಿ ಕಛೇರಿ, ಮೈಸೂರು ದಕ್ಷಿಣ (ಶ್ರೀ ಎಂ. ಕೆ. ಶಾಂತಮೂರ್ತಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 13. | ಎ. ಮೊಹ್ಮದ್ ದಾವೂದ್, ಕೇಂದ್ರ ಕಛೇರಿ, ಆಡಿಟ್ ಶಾಖೆ, ಬೆಂಗಳೂರು | ಉಪ ನೋಂದಣಿ ಕಛೇರಿ, ತುಮಕೂರು (ಶ್ರೀಮತಿ ಮಧುಮಾಲತಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 14. | ಶಾಂತಕುಮಾರಿ, ಕೇಂದ್ರೀಯ ಅಭಿಲೇಖಾಲಯ, ಬೆಂಗಳೂರು. | ಉಪ ನೋಂದಣಿ ಕಛೇರಿ, ಮದ್ದೂರು (ಶ್ರೀಮತಿ ಕಾಂತಿಶೆಟ್ಟಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |
| 15. | ಪಿ. ವಿ. ವೀರರಾಜೇ ಅರಸ್, ಉಪ ನೋಂದಣಿ ಕಛೇರಿ, ದಕ್ಷಿಣ | ನೋಂದಣಿ ಮತ್ತು ಮುದ್ರಾಂಕಗಳ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು ಕೇಂದ್ರ ಕಛೇರಿ, ಬೆಂಗಳೂರು (ಶ್ರೀ ರೇಣುಕಾ ಪ್ರಸಾದ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.813

**ಎಂ. ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ:465:ಡಿಟಿಸಿಆರ್:1999-2000 ದಿನಾಂಕ: 19ನೇ ಮೇ 2005**

**ಉಪಸ್ಥಿತರು :** ಶಾಕಿರ್ ಅಹ್ಮದ್ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ. ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು :** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ನಿರೀಕ್ಷಕರು, ನಂ. 3 ಇ.ಐ.ಬಿ., ಮಂಗಳೂರು ವಿಭಾಗ, ಮಂಗಳೂರು. | | ಪರಾರಿಯಾಗಿರುತ್ತಾರೆ.<br>**ಅರ್ಜಿದಾರರು:**<br>ಶ್ರೀ ಅವರಲ್ ಕೊಯಿಲ್ಲೊ, ಬಿನ್ ಮೇರಿ ಕೊಯಿಲ್ಲೊ ತಣ್ಣೀರುಬಾವಿ, ಮಂಗಳೂರು ತಾಲ್ಲೂಕು. |

### ಪ್ರಕರಣದ ಮುಖ್ಯಾಂಶಗಳು:

ದಿನಾಂಕ: 10.03.2000 ರಂದು ಸಾಯಂಕಾಲ 5.45 ಗಂಟೆಯ ಸಮಯದಲ್ಲಿ ಫಿರ್ಯಾದುದಾರರು ಹಾಗೂ ತಮ್ಮ ಸಿಬ್ಬಂದಿ ಸಮೇತ ಮಂಗಳೂರು ಮಹಾನಗರ ಪಾಲಿಕೆಯ ಉರ್ವ ಮಾರ್ಕೆಟ್, ಸುಲ್ತಾನ್‌ಬತ್ತೇರಿ ರಸ್ತೆಯ ಎಡಭಾಗದ ಐಸ್‌ಪ್ಲಾಂಟ್‌ನ ಹತ್ತಿರ ಅಕ್ರಮವಾಗಿ ಸ್ಕೂಟರ್ ಸಂಖ್ಯೆ: ಎಂಇಜಿ-1691 ರಲ್ಲಿ ಒಂದು ಕೈಚೀಲದಲ್ಲಿ 48 ಪ್ಲಾಸ್ಟಿಕ್ ಪ್ಯಾಕೇಟ್‌ಗಳಿದ್ದು, ಪ್ರತೀ ಪ್ಯಾಕೇಟ್‌ನಲ್ಲಿ 250 ಎಂ.ಎಲ್.ನ ಕಳ್ಳಭಟ್ಟಿ ಸಾರಾಯಿ ಇದ್ದು, ಒಟ್ಟು 12.000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 11,14(2)ರ ಪ್ರಕಾರ ಅಪರಾಧವಾಗಿದ್ದು, ಕಾಲಂ 32,34 ಮತ್ತು 38(ಎ)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 26/1999-2000 ರಲ್ಲಿ ಮೊಕದ್ದಮೆ ದಾಖಲಿಸಿರುತ್ತಾರೆ.

ವಾಹನ ಮಾಲೀಕರಾದ ಶ್ರೀ ಅವರಲ್ ಕೊಯಿಲ್ಲೊ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ: 14.03.2000 ರಂದು ಅರ್ಜಿಸಲ್ಲಿಸಿ, ಸದರಿ ಅರ್ಜಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಈ ಪ್ರಾಧಿಕಾರವು ಸದರಿ ಅರ್ಜಿಯನ್ನು ಪರಿಶೀಲಿಸಿ, ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 17.4.2000 ರಂದು ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ಆದೇಶ ನೀಡಿರುತ್ತದೆ.

ಅರ್ಜಿದಾರರು ಸದರಿ ಆದೇಶದ ವಿರುದ್ಧ ಮಾನ್ಯನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ, ಮಾನ್ಯ ಒಂದನೇಯ ಹೆಚ್ಚುವರಿ ಸೆಷನ್ ನ್ಯಾಯಾಲಯ ಇವರ ಕ್ರಿಮಿನಲ್ ಅಪೀಲ್ ಸಂಖ್ಯೆ: 84/2000 ದಿನಾಂಕ: 27.04.2000ರ ಆದೇಶದಂತೆ ಅರ್ಜಿದಾರರಿಂದ ರೂ.10,000/- ಇಂಡೆಮ್ನಿಟಿ ಬಾಂಡ್ ಹಾಗೂ ಅಷ್ಟೇ ಮೊತ್ತದ ಸಾಲ್ವೆಂಟ್ ಶ್ಯೂರಿಟಿಯನ್ನು ಪಡೆದು ವಶಪಡಿಸಿಕೊಂಡ ಸ್ಕೂಟರನ್ನು ಅರ್ಜಿದಾರರ ವಶಕ್ಕೆ ಕೆಲವು ಷರತ್ತುಗಳ ಅನ್ವಯ ದಿನಾಂಕ: 3.5.2000 ರಂದು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ, ಸರ್ಕಾರದ ಅಭಿಯೋಜನೆ ಪರವಾಗಿ ಮೂರು ಸಾಕ್ಷಿಗಳನ್ನು ಹಾಗೂ ಪ್ರತಿರಕ್ಷಾ ಪರ ಎರಡು ಸಾಕ್ಷಿಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 10.03.2000 ರಂದು ಸ್ಕೂಟರ್ ಸಂಖ್ಯೆ: ಎಂಇಜಿ-1691ರಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆ ಮಾಡಲಾಗಿತ್ತೇ?
2. ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನದ ಮಾಲೀಕ ತಾವೆಂದು ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಕಳ್ಳಭಟ್ಟಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುವುದನ್ನು ಸಾಬೀತುಪಡಿಸಿದ್ದಾರೆಯೇ?
3. ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾದಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ-1:**

ಶ್ರೀ ಎಂ. ಲಿಂಗಣ್ಣ ನಿವೃತ್ತ ಅಬಕಾರಿ ನಿರೀಕ್ಷಕರು ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ: 13.12.2001 ರಂದು, ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 31.03.2000 ರಂದು ಮಂಗಳೂರು ವಿಭಾಗದ ಅಬಕಾರಿ ನಿರೀಕ್ಷಕರವರಿಂದ ಕೇಸಿಗೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಸೊತ್ತುಗಳನ್ನು ಮುಂದಿನ ತನಿಖೆಗಾಗಿ ತೆಗೆದುಕೊಂಡಿರುತ್ತಾರೆ. ದಿನಾಂಕ: 4.04.2000 ರಂದು ಮೊಕದ್ದಮೆಯ ಸ್ಯಾಂಪಲ್ ಸ್ಯಾಚೆಟ್‌ನ್ನು ಹಾಗೂ ಕೋರಿಕೆ ಪತ್ರವನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಶ್ರೀ ಸಿ. ಹೆಚ್. ಗಣಪತಿ ಅಬಕಾರಿ ರಕ್ಷಕ ಇವರೊಡನೆ ರಾಸಾಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ ಹಾಗೂ ವಾಹನದ ಮಾಲೀಕತ್ವದ ಬಗ್ಗೆ ಸಾರಿಗೆ ಅಧಿಕಾರಿಗೆ ಕೋರಿಕೆ ಪತ್ರವನ್ನು ಕೊಟ್ಟಿರುತ್ತೇನೆ. ನಂತರ ದಿನಾಂಕ: 4.4.2000 ರಂದು ರಾಸಾಯನಿಕ ತಜ್ಞರಿಂದ ವರದಿ ಬಂದಿತು. ದಿನಾಂಕ: 22.4.2000 ರಂದು ಅಧಿಕೃತ ಅಧಿಕಾರಿಗಳಿಗೆ ಇದರ ಬಗ್ಗೆ ಒಂದು ವರದಿಯನ್ನು ಕೊಟ್ಟೆನು. ದಿನಾಂಕ: 3.05.2000 ಅಬಕಾರಿ ಅಧೀಕ್ಷಕರ ಆದೇಶದ ಮೇರೆಗೆ ದಿನಾಂಕ: 8.5.2000 ರಂದು ವಾಹನವನ್ನು ವಾಹನದ ಆರ್. ಸಿ. ಮಾಲೀಕರಿಗೆ ಬಿಡುಗಡೆಗೊಳಿಸಲಾಯಿತು ದಿನಾಂಕ: 31.08.2000 ರಂದು ತಾನು ನಿವೃತ್ತರಾದ ಪ್ರಯುಕ್ತ ಮುಂದಿನ ತನಿಖೆಗಾಗಿ ಕದ್ರಿ ವಲಯ ಅಬಕಾರಿ ನಿರೀಕ್ಷಕರಿಗೆ ಮೊಕದ್ದಮೆಗೆ ಸಂಬಂಧಪಟ್ಟ ದಾಖಲಾತಿ ಸೊತ್ತುಗಳನ್ನು ಒಪ್ಪಿಸಿರುತ್ತೇನೆ. ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತಿರಿಸುತ್ತಾ, ತಾನು ಘಟನಾ ಸ್ಥಳಕ್ಕೆ ಹೋಗಿ ನೋಡಿದೆ. ತಾನು ಯಾವ ದಿನದಂದು ಹೋಗಿದ್ದೆ ಎಂಬುವುದನ್ನು ತನ್ನ ಕೇಸ್ ಡೈರಿಯಲ್ಲಿ ಬರೆದಿದ್ದೇನೆ. ತಾನು ಘಟನಾ ಸ್ಥಳಕ್ಕೆ ಹೋದ ದಿನ ಯಾವುದೇ ಹೇಳಿಕೆ ದಾಖಲಿಸಿರುವುದಿಲ್ಲ. ಹೋದ ದಿನ ಸ್ಥಳದಲ್ಲಿ ಯಾವುದೇ ದಾಖಲೆ ಮಾಡಲಿಲ್ಲ. ಅಲ್ಲಿ ಕೆಲವು ಮನೆಗಳಿದ್ದು, ಹತ್ತಿರದಲ್ಲಿ ಯಾವ ಮನೆ ಇದೆ ಎಂದು ಗಮನಿಸಲಿಲ್ಲ, ಘಟನಾ ಸ್ಥಳದ ರಸ್ತೆಯು ಹೊಳೆಗೆ ಹೋಗುತ್ತದೆ. ಸದರಿ ರಸ್ತೆಯ ಹೆಸರು ಜ್ಞಾಪಕ ಇಲ್ಲ ತಾನು ಹೋದ ದಿನ ಪಕ್ಕದಲ್ಲಿರುವ ಮನೆಯವರ ಹೇಳಿಕೆ ಪಡೆದಿರುವುದಿಲ್ಲ. ಸದರಿ

ದಿನಾಂಕದಂದು ವಿಚಾರಣೆ ದಿನ ತಾನು ಘಟನಾ ಸ್ಥಳಕ್ಕೆ ಹೋಗಿಲ್ಲ ಎನ್ನುವುದು ಸರಿಯಲ್ಲ. ಸಾರಿಗೆ ಅಧಿಕಾರಿಯವರು ನೀಡಿದ ಮಾಹಿತಿ ಮೇರೆಗೆ ಅದರ ವಾಹನ ಮಾಲೀಕರು ಯಾರೆಂಬುದು ತಿಳಿದುಕೊಂಡೆ ಸದರಿ ಪ್ರಕರಣದಲ್ಲಿ ಯಾವುದೇ ತನಿಖೆ ಮಾಡಿಲ್ಲ ರಾಸಾಯನಿಕ ಪತ್ರವನ್ನು ತಂದಿಲ್ಲ ಎನ್ನುವುದು ಸರಿಯಲ್ಲ ಎಂದು ತನ್ನ ಸಾಕ್ಷಿ ಹೇಳಿಕೆಯಲ್ಲಿ ನುಡಿದಿರುತ್ತಾರೆ. ಈ ಸಾಕ್ಷಿಯಿಂದ ವಾಹನ ಮಾಲೀಕರಿಗೆ ಯಾವುದೇ ಹೆಚ್ಚಿನ ಪ್ರಯೋಜನಕಾರಿಯಾದ ಅಂಶಗಳು ಕಂಡು ಬರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಜಿ. ಕೆ. ಸುಬ್ರಹ್ಮಣ್ಯ, ನಿವೃತ್ತ ಅಬಕಾರಿ ನಿರೀಕ್ಷಕರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ: 21.03.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಸೆಪ್ಟೆಂಬರ್-98 ರಿಂದ ಜೂನ್-2002 ರ ವರೆಗೆ ಮಂಗಳೂರು ಅಬಕಾರಿ ಗುಪ್ತವಾರ್ತಾದಳದಲ್ಲಿ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದೆ. ದಿನಾಂಕ: 10.03.2000 ರಂದು ಸಂಜೆ 5.15 ಗಂಟೆ ಸಮಯಕ್ಕೆ ನಾನು ನನ್ನ ಸಿಬ್ಬಂದಿಯವರು ಅಕ್ರಮ ಸಾರಾಯಿ ವ್ಯಾಪಾರದ ಬಗ್ಗೆ ಗಸ್ತು ಕಾರ್ಯ ನಡೆಸುತ್ತಾ, ನಗರದ ಉರ್ವ ಮಾರ್ಕೆಟ್ ಕಡೆ ರಸ್ತೆಯಿಂದ ಸುಲ್ತಾನ್ ಬತ್ತೇರಿ ಕಡೆ ಹೋಗುವ ಮಾರ್ಗದಲ್ಲಿ ಹೋಗುತ್ತಿರುವಾಗ, ಸುಲ್ತಾನ್‌ಬತ್ತೇರಿ ಕಡೆಯಿಂದ ಒಂದು ಸ್ಕೂಟರ್ ಬರುತ್ತಿತ್ತು. ನಮ್ಮ ಜೀಪನ್ನು ಕಂಡೊಡನೆ ಸ್ಕೂಟರ್ ಚಾಲಕ ಸ್ಕೂಟರನ್ನು ಹಾವೇರಿ ಬಸ್ ಪ್ಲಾಂಟ್ ಪಕ್ಕದ ರಸ್ತೆಯಲ್ಲಿ ನಿಲ್ಲಿಸಿ ಐಸ್‌ಪ್ಲಾಂಟ್ ಕಟ್ಟಡದ ಬಳಿ ಓಡಿದನು. ಇದರಿಂದ ಅನುಮಾನಗೊಂಡು ಸದ್ರಿ ಸ್ಕೂಟರ್ ಹತ್ತಿರ ನೋಡಲಾಗಿ, ಸ್ಕೂಟರಿನ ಮುಂಭಾಗದ ಕಾಲಿಡುವ ಎಡಭಾಗದಲ್ಲಿ ಒಂದು ಕೈಚೀಲವಿದ್ದು, ಅದರಲ್ಲಿ ಪ್ಲಾಸ್ಟಿಕ್ ಚೀಲಗಳು ತುಂಬಿದ್ದು ಅದರಲ್ಲಿ ದ್ರಾವಕ ತುಂಬಿತ್ತು. ಸಾರಾಯಿ ವಾಸನೆ ಇದರಿಂದ ಬರುತ್ತಿತ್ತು, ಇದರಿಂದಾಗಿ ಸದ್ರಿ, ಸ್ಕೂಟರನ್ನು ತಪಾಸಣೆ ಮಾಡಲು ತೀರ್ಮಾನಿಸಿ ಸಾಕ್ಷಿಗಾಗಿ ಪದ್ಮನಾಭ ಮತ್ತು ರಾಜೇಶ್ ಎಂಬವರನ್ನು ಸಾಕ್ಷಿಯಾಗಿ ಸಹಕರಿಸಬೇಕೆಂದು ಕೇಳಿಕೊಂಡ ಮೇರೆಗೆ ಅವರು ಒಪ್ಪಿರುತ್ತಾರೆ. ನಂತರ ಸ್ಕೂಟರ್ ತಪಾಸಣೆಗಾಗಿ ನ್ಯಾಯಾಲಯದ ವಾರೆಂಟ್ ಪಡೆದುಕೊಳ್ಳಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೋ ತಯಾರಿಸಿ ಪಂಚರ ಸಮಕ್ಷಮ ಸದ್ರಿ ಸ್ಕೂಟರ್ ಶೋಧಿಸಲಾಗಿ, ಸ್ಕೂಟರ್ ಚಾಲಕನು ಕಾಲಿಡುವ ಎಡಭಾಗದಲ್ಲಿ ಕೈಚೀಲವಿದ್ದು, ಅದರಲ್ಲಿ ಸಾರಾಯಿ ತುಂಬಿದ ಒಟ್ಟು 48 ಪ್ಯಾಕೇಟುಗಳು ಕಂಡು ಬಂದವು. ಸದ್ರಿ ಪ್ಯಾಕೇಟ್ ಒಂದರಲ್ಲಿ 230 ಎಂ.ಎಲ್. ನಷ್ಟು ಸಾರಾಯಿ ಇದ್ದು, ಒಟ್ಟು 48 ಪ್ಯಾಕೇಟ್‌ಗಳಲ್ಲಿ 12.000 ಲೀಟರ್‌ನಷ್ಟು ಸಾರಾಯಿ ಕಂಡು ಬಂತು. ಇದರಿಂದಾಗಿ ಇದೊಂದು ಅಕ್ರಮ ಸಾರಾಯಿ ಸ್ವಾಧೀನ ಸಾಗಾಟ ಎಂದು ಖಾತ್ರಿ ಮಾಡಲಾಯಿತು. ಸ್ಕೂಟರ್ ಸಂಖ್ಯೆ: ಎಂಇಜಿ-1691 ಲ್ಯಾಂಬ್ರೆಟರ್ ಸ್ಕೂಟರ್ ಆಗಿತ್ತು. ಇದು ಬೂದು ಬಣ್ಣದಿಂದ ಕೂಡಿದ್ದು, ಇದರ ಇಂಜೀನ್ ನಂ.150 ಎಲ್‌ವೈ 271367 ಆಗಿತ್ತು. ಇದರ ಚಾಸೀಸ್ ನಂ.ಸ್ಪಷ್ಟವಾಗಿ ಕಂಡು ಬರುತ್ತಿರಲಿಲ್ಲ. ಅಲ್ಲದೇ ಸ್ಕೂಟರಿಗೆ ಸಂಬಂಧಪಟ್ಟ ಹಾಗೂ ಸಾರಾಯಿಗೆ ಸಂಬಂಧಪಟ್ಟ ಯಾವುದೇ ದಾಖಲೆ ಪತ್ರಗಳು ಸದರಿ ಸ್ಕೂಟರಿನಲ್ಲಿ ದೊರೆತ್ತಿಲ್ಲ. ನಂತರ 48 ಪ್ಯಾಕೇಟ್ ಸಾರಾಯಿಯಿಂದ ರಾಸಾಯನಿಕ ಪರೀಕ್ಷೆಗಾಗಿ 250 ಎಂ.ಎಲ್.ನ ಒಂದು ಪ್ಯಾಕೇಟ್ ಅದಕ್ಕೆ ಕ್ರಮವಾಗಿ ಇಲಾಖಾ ಮೊಹರು ಮಾಡಿ, ನಂತರ ಸದರಿ ರಾಸಾಯನಿಕ ಮಾದರಿ ಪ್ಯಾಕೇಟಿಗೆ ಮತ್ತು ಉಳಿದ 48 ಪ್ಯಾಕೇಟಿದ್ದ ಚೀಲಕ್ಕೆ ಗುರುತಿನ ಚೀಟಿ ಹಚ್ಚಲಾಯಿತು. ಮೊಹರಿನ ನಮೂನೆ ತಯಾರಿಸಲಾಯಿತು. ಸ್ಥಳದಲ್ಲಿ ಯಾದಾಸ್ತು ಬರೆದು ಸಾಕ್ಷಿಗಳ ಸಹಿ ಪಡೆದಿರುತ್ತೇನೆ. ನಂತರ ಸಾರಾಯಿ ಮತ್ತು ಸ್ಕೂಟರನ್ನು ಜಪ್ತಿ ಮಾಡಿಕೊಂಡು ಮುಂದಿನ ನಡವಳಿಕೆ ಬಗ್ಗೆ ಇಲಾಖಾ ವಶಕ್ಕೆ ತೆಗೆದುಕೊಳ್ಳಲಾಯಿತು. ಓಡಿಹೋದ ಆರೋಪಿಯನ್ನು ಸ್ಥಳದಲ್ಲಿ ಪತ್ತೆ ಹಚ್ಚಲಾಗಿ ದೊರೆತ್ತಿರುವುದಿಲ್ಲ. ಆತನು ನೋಡಲು ಗಿಡ್ಡವಾಗಿ ಸದರಿ ಸಮಯ ಕೆಂಪು ಬಣ್ಣದ ಶರ್ಟ್, ಕಪ್ಪು ಬಣ್ಣದ ಪ್ಯಾಂಟ್ ಧರಿಸಿದ್ದ. ನಂತರ ಕಛೇರಿಗೆ ಬಂದು ತಕ್ಷೀರು ದಾಖಲಿಸಿ ನಂತರ ಯಾದಾಸ್ತು, ಪ್ರಥಮ ಮಾಹಿತಿ ವರದಿಯ ಮೂಲ ಪ್ರತಿಯನ್ನು, ಸೊತ್ತುಗಳ ಪಟ್ಟಿಯ ನಕಲನ್ನು ಮಾನ್ಯ ನ್ಯಾಯಾಲಯಕ್ಕೂ ಮತ್ತು ಯಾದಾಸ್ತಿನ ನಕಲು ಮತ್ತು ಪ್ರಥಮ ಮಾಹಿತಿ ವರದಿ, ಸೊತ್ತುಗಳ ಪಟ್ಟಿ, ಮೂಲ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತೇನೆ.

ನಂತರ ಈ ತಕ್ಷೀರಿಗೆ ಸಂಬಂಧಪಟ್ಟ ದಾಖಲಾತಿ ಪತ್ರಗಳನ್ನು ಮತ್ತು ಸೊತ್ತುಗಳನ್ನು ಮುಂದಿನ ತನಿಖೆ ಬಗ್ಗೆ ಕೊಳೂರು ವಲಯ ಅಬಕಾರಿ ನಿರೀಕ್ಷಕರಿಗೆ ದಿನಾಂಕ: 30.3.2000 ರಂದು ಹಸ್ತಾಂತರಿಸಿರುತ್ತೇನೆ. ಈ ಪ್ರಕರಣದ ಪ್ರಥಮ ಮಾಹಿತಿ ವರದಿ ಮತ್ತು ಮಹಜರು ಮೂಲ ಪ್ರತಿಗಳು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಇರುತ್ತದೆ. ಇವುಗಳ ಪ್ರತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತೇನೆ. ಪ್ರಥಮ ಮಾಹಿತಿಯನ್ನು ನಿಶಾನೆ ಪಿ-1 ಎಂದು ಮಹಜರಿನ ಪ್ರತಿಯನ್ನು ನಿಶಾನೆ ಪಿ-2 ಎಂದು ಮತ್ತು ಪ್ರಕರಣದಲ್ಲಿ ಜಪ್ತುಪಡಿಸಿದ ವಸ್ತುಗಳ ಬಗ್ಗೆ ವರದಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ದಿನಾಂಕ: 30.03.2000 ರಂದು ಈ ಪ್ರಕರಣದ ಕಡತವನ್ನು ಕೂಳೂರು ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತೇನೆ. ಪ್ರಕರಣವನ್ನು ಹಸ್ತಾಂತರ ಮಾಡುವ ಸಮಯ ಈ ತಕ್ಷೀರಿನಲ್ಲಿ ಯಾರು ಭಾಗಿಯಾಗಿದ್ದಾರೆ ಎಂದು ಗೊತ್ತಿಲ್ಲ. ದಿನಾಂಕ: 14.03.2000 ರಂದು ಈ ಸ್ಕೂಟರನ್ನು ಬಿಡುವಂತೆ ಕೋರಿ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಲಾಗಿದೆ ಎಂದರೆ ನನಗೆ ಗೊತ್ತಿಲ್ಲ. ಈ ಪ್ರಕರಣಕ್ಕೆ ಸಂಬಂಧಿಸಿದ ವಾಹನದ ಮಾಲೀಕರು ಯಾರು ಎಂಬುದರ ಬಗ್ಗೆ ನಾನು ತನಿಖೆ ಮಾಡಿಲ್ಲ ಆರ್.ಟಿ.ಓ. ಕಛೇರಿಗೆ ಹೋಗಿ ಮಾಲೀಕರು ಯಾರು ಎಂಬ ಬಗ್ಗೆ ತನಿಖೆ ಮಾಡಿಲ್ಲ, ಪ್ರಕರಣದ ಕಡತವನ್ನು ಹಸ್ತಾಂತರಿಸುವ ಮೊದಲು ವಾಹನದ ಮಾಲೀಕರು ಯಾರು ಎಂಬುವುದನ್ನು ತಿಳಿದುಕೊಳ್ಳಲು ಸಮಯಾವಕಾಶ ಇರಲಿಲ್ಲ. ವಾಹನದ ಮಾಲೀಕರನ್ನು ನಾನು ವಿಚಾರಿಸಲಿಲ್ಲ. ಮಹಜರಿಗೆ ಸಹಿ ಮಾಡಿದ ಸಾಕ್ಷಿದಾರರು ಒಬ್ಬರು ಬಂಟ್ವಾಳದವರು ಮತ್ತು ಇನ್ನೊಬ್ಬ ಕುಲಶೇಖರದವರು ಎಂದರೆ ಸರಿ. ತಕ್ಷೀರು ಸ್ಥಳದಲ್ಲಿ ಸ್ವಲ್ಪ ದೂರದಲ್ಲಿ ಮನೆಗಳು ಇರುತ್ತದೆ. ಸದರಿ ಸಾಕ್ಷಿದಾರರು ಸ್ಥಳೀಯ ನಿವಾಸಿಗಳೆಂದು ಹೇಳಿದರಿಂದ ಅವರ ಸಹಿಯನ್ನು ಪಡೆದುಕೊಂಡಿರುತ್ತೇನೆ. ಮಹಜರಿನಲ್ಲಿ ಸಾಕ್ಷಿದಾರರ ಖಾಯಂ ವಿಳಾಸ ಮತ್ತು ತಾತ್ಕಾಲಿಕ ವಿಳಾಸವನ್ನು ನಮೂದಿಸಿಲ್ಲ ಎಂದರೆ ಸರಿ. ಸಾಕ್ಷಿದಾರರು ಸ್ಥಳೀಯ ನಿವಾಸಿಗಳೇ, ಸಾಕ್ಷಿದಾರರು ಯಾವ ಮನೆಯಲ್ಲಿ ವಾಸಿಸುತ್ತಾರೆ ಮತ್ತು ಅವರು ವಾಸಿಸುವ ಮನೆ ನನಗೆ ಗೊತ್ತಿಲ್ಲ.

ಸಾಕ್ಷಿದಾರರು ಸ್ಥಳೀಯರು ಎಂದು ಮಹಜರಿನಲ್ಲಿ ನಮೂದಿಸಿಲ್ಲ. ತಕ್ಷೀರು ಸ್ಥಳದ ಸಮೀಪ ಯಾರ ಮನೆ ಇದೆ ಎಂದು ನನಗೆ ಗೊತ್ತಿಲ್ಲ. ಅಲ್ಲಿಗೆ ನಾನು ಹೋಗಿಲ್ಲ. ತಕ್ಷೀರು ಸ್ಥಳದಲ್ಲಿ ರಾತ್ರಿ 9.00 ಗಂಟೆಯವರೆಗೆ ವಾಹನಗಳು ಸಂಚರಿಸುತ್ತದೆ ಎಂದರೆ ಸರಿಯಲ್ಲ ಮತ್ತು ತಕ್ಷೀರು ಸ್ಥಳದಲ್ಲಿ ಜನರು ಇರುತ್ತಾರೆ ಎನ್ನುವುದು ಸರಿಯಲ್ಲ. ತಕ್ಷೀರು ಸ್ಥಳದಲ್ಲಿ ನಾನು ಮುಕ್ಕಾಲು ಗಂಟೆಯವರೆಗೆ ಇದ್ದೆವು. ಆ ಸಮಯದಲ್ಲಿ ಯಾವುದೇ ವಾಹನ ಸಂಚಾರವಿರಲಿಲ್ಲ, ತಕ್ಷೀರು ಸ್ಥಳದಲ್ಲಿ ಸ್ಕೂಟರಿನ ಮೇಲೆ ಕಾಲಿಟ್ಟು ಮಹಜರು ಬರೆಯಲಾಗಿದೆ. ತಕ್ಷೀರು ಸ್ಥಳದಲ್ಲಿ ಮಹಜರು, ಮಾದರಿ ಸೀಲ್, ಸರ್ಚ್ ಲಿಸ್ಟ್, ಸರ್ಚ್ ಮೊಮೋ ಸ್ಕೂಟರಿನ ಮೇಲೆ ಕಾಲಿಟ್ಟು ತಯಾರಿಸಿರುತ್ತೇನೆ. ತಕ್ಷೀರು ಸ್ಥಳದಲ್ಲಿ ಸಿಟಿ ಬಸ್ಸು ಸಂಚರಿಸುತ್ತಿರುತ್ತದೆ ಎಂದರೆ ನನಗೆ ಗೊತ್ತಿಲ್ಲ. ಉಳಿದ ದಾಖಲೆಗಳಿಗೂ ಸಹಾ ಸಾಕ್ಷಿದಾರರ ಸಹಿ ಪಡೆದಿರುತ್ತೇನೆ. ಸರ್ಚ್ ಲಿಸ್ಟ್ ತಯಾರಿಸಿದ್ದೇವೆ ಎಂದು ಸುಳ್ಳು ಹೇಳುತ್ತೇವೆ ಎನ್ನುವುದು ಸರಿಯಲ್ಲ. ಸರ್ಚ್‌ಲಿಸ್ಟ್ ಮತ್ತು ಸರ್ಚ್‌ಮೆಮೋ ಈ ಪ್ರಾಧಿಕಾರದ ಮುಂದೆ ಸಲ್ಲಿಸಿರುವುದಿಲ್ಲ ಎಂದರೆ ಸರಿಯಲ್ಲ. ಸದರಿ ದಾಖಲೆಗಳಿಗೆ ಸಾಕ್ಷಿದಾರರ ಸಹಿಯನ್ನು ಪಡೆದಿರುವುದಿಲ್ಲ ಎಂದರೆ ಸರಿಯಲ್ಲ, ವಾಹನ ಮಾಲೀಕರು ಎಲ್ಲಿ ಕೆಲಸ ಮಾಡುತ್ತಾರೆ ಎಂಬುವುದು ನನಗೆ ಗೊತ್ತಿಲ್ಲ. ವಾಹನ ಮಾಲೀಕರ ವಿರುದ್ಧ

ಕ್ರಿಮಿನಲ್ ಕೋರ್ಟ್‌ನಲ್ಲಿ ಇರುವ ಮೊಕದ್ದಮೆಯಲ್ಲಿ ಆರೋಪಿತನಿಗೆ ಬಿಡುಗಡೆಯಾಗಿದೆ ಎಂದಬ ವಿಷಯ ನನಗೆ ಗೊತ್ತಿಲ್ಲ ಈ ಪ್ರಕರಣದಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಆರೋಪಿತನ ವಿರುದ್ದ ಸುಳ್ಳು ಮೊಕದ್ದಮೆ ದಾಖಲು ಮಾಡಿರುತ್ತೇನೆ ಎಂದರೆ ಸರಿಯಲ್ಲ. ಈ ಪ್ರಕರಣದಲ್ಲಿ ಸ್ಕೂಟರಿನಲ್ಲಿ ನಾನು ಯಾವುದೇ ವಸ್ತುವನ್ನು ವಶಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಆರೋಪಿತರ ಮನೆ ಎಲ್ಲಿದೆ ಎಂದು ನನಗೆ ಗೊತ್ತಿಲ್ಲ, ವಾಹನ ಮಾಲೀಕರು ತಮ್ಮ ಮನೆಗೆ ಹೋಗಬೇಕಾದರೆ ಸ್ಕೂಟರನ್ನು ಬಸ್‌ಪ್ಲಾಂಟ್‌ನ ಹತ್ತಿರ ಇಟ್ಟು ಅಲ್ಲಿಂದ ದೋಣಿಯಿಂದ ದಾಟಿ ಮನೆಗೆ ಹೋಗಬೇಕು ಎನ್ನುವುದು ನನಗೆ ಗೊತ್ತಿಲ್ಲ. ಸ್ಕೂಟರಿನಲ್ಲಿ ಮಕ್ಕಳನ್ನು ಶಾಲೆಗೆ ಬಿಟ್ಟು ಕರೆದುಕೊಂಡು ಹೋಗುತ್ತಾರೆ ಎಂಬ ವಿಷಯ ನನಗೆ ಗೊತ್ತಿಲ್ಲ. ಅರ್ಜಿದಾರರು ಈ ಪ್ರಾಧಿಕಾರಕ್ಕೆ ಅರ್ಜಿಸಲ್ಲಿಸಿದ ವಿಷಯ ನನಗೆ ಗೊತ್ತಿಲ್ಲ. ನಾನು ಈ ಪ್ರಕರಣದಲ್ಲಿ ವಾಹನದ ವಿರುದ್ದ ಸುಳ್ಳು ಪ್ರಕರಣವನ್ನು ದಾಖಲು ಮಾಡಿದ್ದೇನೆ ಎನ್ನುವುದು ಸರಿಯಲ್ಲ, ಮಹಜರು ಸಾಕ್ಷಿದಾರರನ್ನು ನಾನೇ ಹೊರಗಿನಿಂದ ಕರೆದುಕೊಂಡು ಬಂದು ಅದರ ಸಹಿಯನ್ನು ಪಡೆದಿರುತ್ತೇನೆ ಎನ್ನುವುದು ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯಿಂದ ವಾಹನ ಮಾಲೀಕರಿಗೆ ಯಾವುದೇ ಹೆಚ್ಚಿನ ಪ್ರಯೋಜನಕಾರಿಯಾದ ಅಂಶಗಳು ಕಂಡು ಬರುವುದಿಲ್ಲ.

**ಪ್ರಾ.ಸಾ-3:**

ಶ್ರೀ ಸಿ. ಹೆಚ್. ಗಣಪತಿ ಅಬಕಾರಿ ರಕ್ಷಕ, ಕೂಳೂರು ವಲಯ ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ಇವರು ದಿನಾಂಕ: 21.08.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 2000ನೇ ಇಸವಿಯಲ್ಲಿ ಕೊಳೂರು ವಲಯದಲ್ಲಿ ಅಬಕಾರಿ ರಕ್ಷಕನಾಗಿ ಕೆಲಸ ನಿರ್ವಹಿಸುತ್ತಿದ್ದೇನೆ. ದಿನಾಂಕ: 4.4.2000 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 250 ಎಂ.ಎಲ್.ನ ಒಂದು ಮಾದರಿ ಸ್ಯಾಚೇಟನ್ನು ಕೂಳೂರು ವಲಯ ಅಬಕಾರಿ ನಿರೀಕ್ಷಕರು ನನಗೆ ಕೊಟ್ಟಿದ್ದರು. ಅದನ್ನು ಮಂಗಳೂರು ರಾಸಾಯನಿಕ ತಜ್ಞರಿಗೆ ಅದೇ ದಿನ ಸಲ್ಲಿಸಿರುತ್ತೇನೆ. ದಿನಾಂಕ: 22.04.2000 ರಂದು ತಜ್ಞರಿಂದ ಪರಿಶೀಲಿಸಿದ ಸ್ಯಾಚೇಟನ್ನು ಮತ್ತು ತಜ್ಞರ ವರದಿಯನ್ನು ಅಬಕಾರಿ ನಿರೀಕ್ಷಕರಿಗೆ ಸಲ್ಲಿಸಿರುತ್ತೇನೆ. ತಜ್ಞರು ನೀಡಿದ ವರದಿ ಪ್ರತಿ ನೋಡಿ ಗುರುತಿಸಿದೆ. ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಈ ಕೇಸಿನಲ್ಲಿ ಎಷ್ಟು ಪ್ಲಾಸ್ಟಿಕ್ ಸ್ಯಾಚೇಟ್ ಸೀಜ್ ಮಾಡಿದ್ದಾರೆಂದು ಗೊತ್ತಿಲ್ಲ. ಮಾದರಿ ಸ್ಯಾಚೆಟಿಗೆ ಯಾವುದೇ ಗುರುತು ಇಲ್ಲ ಸದರಿ ಮಾದರಿ ಸ್ಯಾಚೆಟ್‌ಗಳು ಎಲ್ಲಿ ತಯಾರಿಸಿದ್ದು, ಅದು ಮಾರಲಿಕ್ಕೆ ಇರುವುದೋ ಎಂಬುದು ನನಗೆ ತಿಳಿದಿಲ್ಲ, ಸದರಿ ಸ್ಯಾಚೆಟನ್ನು ಕೊಂಡೊಯ್ಯುವುದಕ್ಕೆ ನನಗೆ ನನ್ನ ವೈಯಕ್ತಿಕ ದಾಖಲೆ ಇಲ್ಲ ಸದರಿ ಸ್ಯಾಚೆಟನ್ನು ತಜ್ಞರಿಂದ ತಲುಪಿಸಿದಕ್ಕೆ ನನ್ನಲ್ಲಿ ಯಾವುದೇ ವೈಯಕ್ತಿಕ ದಾಖಲೆ ಇಲ್ಲ, ನಾನು ಯಾವುದೇ ಸ್ಥಳಕ್ಕೆ ಹೋಗಿದ್ದಕ್ಕೆ ನಮ್ಮ ಮೂವ್‌ಮೆಂಟ್ ರಿಜಿಸ್ಟರ್ ನಮೂದು ಮಾಡುತ್ತೇವೆ. ಅದು ನನ್ನ ಹತ್ತಿರ ಇರುವುದಿಲ್ಲ. ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನಾನು ಸಾಕ್ಷಿ ನುಡಿಸಿರುತ್ತೇನೆ. ಜೆಎಂಎಫ್‌ಸಿ. ನ್ಯಾಯಾಲಯದಲ್ಲಿ ಆರೋಪಿಯ ಬಿಡುಗಡೆಯಾಗಿದೆ. ಈ ಪ್ರಕರಣದಲ್ಲಿ ನಾನು ಯಾವುದೇ ಮಾದರಿ ಸ್ಯಾಚೇಟನ್ನು ತಜ್ಞರಿಗೆ ತಲುಪಿಸಲಿಲ್ಲ ಎಂದರೆ ಸರಿಯಲ್ಲ. ಸದರಿ ಸ್ಯಾಚೆಟನ್ನು ಹಂದು ನೋಡಲಿಲ್ಲ. ಅದು ಕೊಂಡೊಯ್ಯುವಾಗ ಸರಿಯಾಗಿತ್ತು, ಸದರಿ ಸ್ಯಾಚೆಟ್ ಒಳಗಿನಿಂದ ಪ್ರತ್ಯೇಕವಾಗಿ ಮಾದರಿಯಾಗಿ ತೆಗೆದಿಲ್ಲ. ನಾನು ಸುಳ್ಳು ಹೇಳುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಅಭಿಯೋಜನಾ ಪರ ಪಾ.ಸಾ-1,2 ಮತ್ತು 3ರ ಸಾಕ್ಷಿ ಹೇಳಿಕೆಗಳಿಂದ ಮತ್ತು ಹಾಜರುಪಡಿಸಿರುವ ದಾಖಲೆಗಳ ಆಧಾರದಿಂದ ಜಪ್ತುಪಡಿಸಲಾದ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟ ಮಾಡಿರುವುದು ಸಾಬೀತಾಗಿರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶ ಎಂದರೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತನ್ನ ತಿಳುವಳಿಕೆಗೆ ಇಲ್ಲದೇ ಈ ಅಕ್ರಮ ಜರುಗಿದೆ ಎಂದು ಸಾಬೀತುಗೊಳಿಸಬೇಕಾಗಿರುತ್ತದೆ. ಅರ್ಜಿದಾರರ ಪರ ಪ್ರತಿರಕ್ಷೆ ಸಾಕ್ಷಿಗಳ ಹೇಳಿಕೆಯನ್ನು ಈ ಕೆಳಗಿನಂತೆ ಹಡೆದಿರುತ್ತದೆ.

**ಡಿ.ಡಬ್ಲ್ಯೂ-1:**

ಅವರಲ್ ಕೊಯಿಲ್ಲೊ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 13.1.2005 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ರಿಕ್ಷಾ ಚಾಲಕನಾಗಿ ಕೆಲಸ ಮಾಡುತ್ತಿದ್ದೇನೆ. ತಾನು ತಣ್ಣೀರುಬಾವಿಯ ನಿವಾಸಿಯಾಗಿರುತ್ತೇನೆ. ತಣ್ಣೀರುಬಾವಿಯಲ್ಲಿ ನನಗೆ ಕೃಷಿ ಜಮೀನು ಮತ್ತು ವಾಸದ ಮನೆ ಇರುತ್ತದೆ. ನನ್ನ ತಂದೆಗೆ 4 ಜನ ಮಕ್ಕಳು, ಸದರಿ ಮನೆಯಲ್ಲಿ ನಾಲ್ಕು ಮಂದಿ ಅಣ್ಣ ತಮ್ಮಂದಿರು ಹಾಗೂ ತಾಯಿ ಮತ್ತು ನನ್ನ ಹೆಂಡತಿ ಇರುತ್ತಾರೆ. ನನಗೆ ಎರಡು ಮಕ್ಕಳು ಒಂದು ಹೆಣ್ಣು ಮತ್ತು ಗಂಡು ಮಕ್ಕಳಿರುತ್ತದೆ. ನನ್ನ ಮಗುವಿಗೆ 10 ವರ್ಷ ಪ್ರಾಯ, ಅವಳು ಶಾಲೆಗೆ ಹೋಗುತ್ತಾಳೆ. ಅವಳು ಮಂಗಳೂರಿನ ಉರ್ವ ಸೈಂಟ್ ಅಲೋಸಿಯಸ್ ಪ್ರಾಥಮಿಕ ಶಾಲೆಗೆ ಹೋಗುತ್ತಾಳೆ. ಅದು ಲೇಡಿಹಿಲ್‌ನ ಉರ್ವಸ್ಟೋರ್ ಹತ್ತಿರ ಇರುತ್ತದೆ. ನಮ್ಮ ಮನೆಯಿಂದ ಸದರಿ ಶಾಲೆಗೆ ಬರಲು ನೇರವಾದ ಮಾರ್ಗವಿಲ್ಲ. ನಮ್ಮ ಮನೆ ಮತ್ತು ಸದರಿ ಶಾಲೆಯ ಮಧ್ಯೆ ನದಿ ಇರುತ್ತವೆ. ಮನೆಯಿಂದ ಹೊರಡುವಾಗ ದೋಣಿಯಲ್ಲಿ ದಾಟಿ ಸುಲ್ತಾನ್ ಬತ್ತೇರಿಗೆ ಬರುತ್ತೇವೆ. ಸುಲ್ತಾನ್ ಬತ್ತೇರಿಯಿಂದ ಶಾಲೆಗೆ ಸ್ಕೂಟರಿನಲ್ಲಿ ಮಗುವನ್ನು ಕರೆತರುತ್ತೇವೆ. ನನ್ನ ಸ್ಕೂಟರ್ ಸಂಖ್ಯೆ: ಎಂಇಜಿ-1691 ಇರುತ್ತದೆ. ಈ ಸ್ಕೂಟರನ್ನು ನಾನು ಕಾವೇರಿ ಐಸ್ ಪ್ಲಾಂಟ್‌ನ ಹತ್ತಿರ ಇಡುತ್ತೇನೆ. ಸದರಿ ಐಸ್ ಪ್ಲಾಂಟ್ ಸುಲ್ತಾನ್ ಬತ್ತೇರಿ ಹತ್ತಿರ ಉಂಟು. ಐಸ್‌ಪ್ಲಾಂಟ್ ಹತ್ತಿರವೇ ನದಿ ತೀರ ಇರುತ್ತದೆ. ಮನೆಯಿಂದ ಶಾಲೆಗೆ ಹೊರಡುವಾಗ ಬೆಳಿಗ್ಗೆ 8.00 ಗಂಟೆ ಸಮಯವಾಗಿರುತ್ತದೆ ದಿನಾಂಕ: 10.3.2000 ರಂದು ಬೆಳಿಗ್ಗೆ 8.00 ಗಂಟೆ ಸಮಯಕ್ಕೆ ಮಗಳನ್ನು ಮನೆಯಿಂದ ಶಾಲೆಗೆ ಹೊರಟೆನು ನದಿ ದಾಟಲು ದೋಣಿಯಲ್ಲಿ ಬಂದು ಸುಲ್ತಾನ್ ಬತ್ತೇರಿಗೆ ಬಂದು ಅಲ್ಲಿಂದ ಸ್ಕೂಟರಿನಲ್ಲಿ ಹೊರಟೆನು. ಐಸ್ ಪ್ಲಾಂಟ್‌ನಿಂದ ಸ್ಕೂಟರಿನಲ್ಲಿ ಶಾಲೆಗೆ ಹೊರಡುವಾಗ ಬೆಳಿಗ್ಗೆ 8.10 ಸಮಯವಾಗಿರಬಹುದು. ನಾನು ನೇರವಾಗಿ ಶಾಲೆಗೆ ಬಂದು ನನ್ನ ಮಗುವನ್ನು ಅಲ್ಲಿ ಬಿಟ್ಟೆನು. ನಾನು ತಿರುಗಿ ಸದರಿ ಸ್ಕೂಟರಿನಲ್ಲಿ ಕಾವೇರಿ ಐಸ್ ಪ್ಲಾಂಟ್‌ಗೆ ಬಂದೆನು. ಮರಳಿ ಐಸ್ ಪ್ರಾಂಟಿಗೆ ಬಂದಾಗ 8.20 ಆಗಿರಬಹುದು. ಸ್ಕೂಟರ್‌ನ್ನು ಕಾವೇರಿ ಐಸ್ ಪ್ಲಾಂಟ್‌ನಲ್ಲಿ ಇಟ್ಟು ನಂತರ ನದಿ ದಾಟಿ ಮನೆಗೆ ಬಂದನು. ಮನೆಗೆ ಬಂದ ನಂತರ ಸ್ವಲ್ಪ ಕೃಷಿ ಕೆಲಸ ಇತ್ತು. ಅದನ್ನು ಮುಗಿಸಿ ರಿಕ್ಷಾ ಚಾಲಕ ಕೆಲಸಕ್ಕೆ ಹೋದೆನು. ರಿಕ್ಷಾವನ್ನು ಮೂರು ಗಂಟೆಯವರೆಗೆ ಚಲಾಯಿಸಿ, ನಂತರ ಪುನಃ ಮನೆಗೆ ಬಂದೆನು. ನಾನು ನನ್ನ ರಿಕ್ಷಾವನ್ನು ಉರ್ವದಲ್ಲಿ ಇಟ್ಟೆನು. ಅಲ್ಲಿಂದ ನಾನು ದೋಣಿ ಮುಖಾಂತರ ಮನೆಗೆ ಬಂದೆನು. ಮತ್ತೆ ನಾನು ಮಗುವನ್ನು ಕರೆತರಲು ಶಾಲೆಗೆ ಬಂದು ಮತ್ತು ದೋಣಿ ದಾಟಿ ಐಸ್ ಪ್ಲಾಂಟಿಗೆ ಬಂದು ಐಸ್ ಪ್ಲಾಂಟಿನಲ್ಲಿ ಸ್ಕೂಟರಿನಲ್ಲಿ ಶಾಲೆಗೆ ಬಂದೆನು.

ಶಾಲೆಯಿಂದ ನನ್ನ ಮಗಳನ್ನು ಕರೆದುಕೊಂಡು ಮತ್ತೆ ಕಾವೇರಿ ಐಸ್ ಪ್ಲಾಂಟಿನ ಹತ್ತಿರ ಬಂದೆನು. ಸ್ಕೂಟರನ್ನು ಅಲ್ಲಿಯೇ ಬಿಟ್ಟು ದೋಣಿಯಿಂದ ನನ್ನ ಮಗಳನ್ನು ಕರೆದುಕೊಂಡು ಅಲ್ಲಿಗೆ ಬಂದೆನು ಮಗಳನ್ನು ನಾನೇ ಮನೆಗೆ ಕರೆದುಕೊಂಡು ಹೋದೆನು. ನನ್ನ ಮಗುವಿಗೆ ಮನೆಯಲ್ಲಿ ಪಾಠ ಹೇಳುತ್ತೇನೆ. ಸಮಯವಿದ್ದರೆ ಸ್ವಲ್ಪ ಕೃಷಿ ಕೆಲಸ ಮತ್ತು ರಿಕ್ಷಾ ಚಾಲನೆ ಮಾಡುತ್ತೇನೆ. ನನ್ನ ಸ್ಕೂಟರನ್ನು ಪ್ರತಿದಿನ ಕಾವೇರಿ ಐಸ್ ಪ್ಲಾಂಟಿನ ಹತ್ತಿರ ಇಡುತ್ತೇನೆ. ನನ್ನ ಸ್ಕೂಟರನ್ನು ಐಸ್ ಪ್ಲಾಂಟಿನ ಹತ್ತಿರ ರಸ್ತೆಯ ಬದಿಯಲ್ಲಿ ಬೀಗ ಹಾಕಿ ಇಡುತ್ತೇನೆ. ನಾನು ಪ್ರತಿ ದಿನ ಇದೇ ರೀತಿ ನನ್ನ ಸ್ಕೂಟರನ್ನು ಇರುತ್ತೇನೆ. ದಿನಾಂಕ: 11.3.2000 ರಂದು ನಾನು ಎಂದಿನಂತೆ ಐಸ್‌ಪ್ಲಾಂಟ್ ಹತ್ತಿರ ಬಂದಾಗ, ನನ್ನ ಸ್ಕೂಟರ್ ಐಸ್ ಪ್ಲಾಂಟ್‌ನ ಹತ್ತಿರ ಇರಲಿಲ್ಲ.

ಹಿಂದಿನ ದಿನ ದಿನಾಂಕ: 10.3.2000 ರಂದು ರಂದು ನನ್ನ ಸ್ಕೂಟರನ್ನು ಐಸ್ ಪ್ಲಾಂಟಿನ ಹತ್ತಿರ ಮಧ್ಯಾಹ್ನ 2.10 ಗಂಟೆಗೆ ಸದರಿ ಜಾಗದಲ್ಲಿ ನಿಲ್ಲಿಸಿದನು. ನನ್ನ ಸ್ಕೂಟರ್ ಇಲ್ಲದಿದ್ದರಿಂದ ನಾನು ಹುಡುಕಾಡಿದೆನು. ಅಲ್ಲಿಯೇ ಹತ್ತಿರದ ಜಾಗದಲ್ಲಿ ಕೊಂಡೊಯ್ದು ಇಟ್ಟಿರಬಹುದು ಎಂದು ಹುಡುಕಾಡಿದೆನು. ಸದರಿ ಸ್ಥಳದ ಮನೆಯ ಹತ್ತಿರದವರನ್ನು ವಿಚಾರಿಸಲಾಯಿತು. ನಿನ್ನೆಯ ದಿನ ಅಬಕಾರಿ ಇಲಾಖೆಯ ಅಧಿಕಾರಿಗಳು ಸ್ಕೂಟರನ್ನು ಕೊಂಡೊಯಿದ್ದಾರೆ ಎಂದು ತಿಳಿಸಿದರು. ದಿನಾಂಕ: 12.3.2000 ರಂದು ನಾನು ಅಬಕಾರಿ ಕಛೇರಿಗೆ ಹೋದೆನು. ಅಬಕಾರಿ ಕಚೇರಿಯಲ್ಲಿ ನನ್ನ ಸ್ಕೂಟರ್ ಇತ್ತು. ನಾನು ಅಬಕಾರಿ ಅಧಿಕಾರಿಗಳನ್ನು ವಿಚಾರಿಸಿ, ಸದರಿ ಸ್ಕೂಟರ್ ನನ್ನದು ಎಂದು ತಿಳಿಸಿದೆನು. ಸದರಿ ಸ್ಕೂಟರಿನಲ್ಲಿ ಸಾರಾಯಿ ಇತ್ತು ಎಂದು ಅಬಕಾರಿ ಅಧಿಕಾರಿಗಳು ನನಗೆ ತಿಳಿಸಿದರು. ನಾನು ಯಾವುದೇ ಸಾರಾಯಿಯನ್ನು ಮಾರಾಟ ಮಾಡುವುದಿಲ್ಲ ಎಂದು ತಿಳಿಸಿದೆನು ಸದರಿ ಸ್ಕೂಟರನ್ನು ತಮಗೆ ಬಿಡಲು ಅಧಿಕಾರ ಇಲ್ಲ ಎಂದು, ಅದನ್ನು ಅಧಿಕೃತ ಅಧಿಕಾರಿಗಳಿಗೆ ಅರ್ಜಿಸಲ್ಲಿಸಿ ಬಿಡಿಸಿಕೊಳ್ಳಬಹುದು ಎಂದು ತಿಳಿಸಿದರು. ನಾನು ಅಧಿಕೃತ ಅಧಿಕಾರಿಗಳೊಂದಿಗೆ ದಿನಾಂಕ: 14.3.2000 ರಂದು ಒಂದು ಅರ್ಜಿಸಲ್ಲಿಸಿರುತ್ತೇನೆ. ಅಧಿಕೃತ ಅಧಿಕಾರಿಯವರು ವಾಹನವನ್ನು ಬಿಡುಗಡೆ ಮಾಡಲಿಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ ಎಂದು ನನ್ನ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ನಾನು ಮಾನ್ಯ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಿರುತ್ತೇನೆ. ಮಾನ್ಯ ಸೆಷನ್ ನ್ಯಾಯಾಲಯವು ನನ್ನ ಮೇಲ್ಮನವಿಯನ್ನು ಅಂಗೀಕರಿಸಿ ಸ್ಕೂಟರನ್ನು ನನಗೆ ಬಿಡ್ಡುಕೊಡುವಂತೆ ಆಜ್ಞೆ ಹೊರಡಿಸಿರುತ್ತದೆ. ನ್ಯಾಯಾಲಯದ ಆದೇಶದಂತೆ ನಾನು ಸ್ಕೂಟರನ್ನು ಅಧಿಕೃತ ಅಧಿಕಾರಿಗಳಿಂದ ಪಡೆದಿರುತ್ತೇನೆ. ನಾನು ಅಕ್ರಮವಾಗಿ ಯಾವುದೇ ಸಾರಾಯಿ ಸಾಗಾಟವನ್ನು ಮಾಡಿರುವುದಿಲ್ಲ. ನಾನು ಕೃಷಿ ಮತ್ತು ರಿಕ್ಷಾ ಚಾಲನೆಯನ್ನು ಮಾತ್ರ ಮಾಡುತ್ತೇನೆ. ನನಗೆ ರಿಕ್ಷಾ ಚಾಲನೆ ಲೈಸನ್ಸು ಇದೆ. ಇದರ ಛಾಯಾ ಪ್ರತಿಯನ್ನು ನಿಶಾನೆ ಡಿ-1 ಎಂದು ಗುರುತಿಸಲಾಯಿತು. ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ಜೆ.ಎಂ.ಎಫ್.ಸಿ., ಮೂರನೇಯ ನ್ಯಾಯಾಲಯದಲ್ಲಿ ನನ್ನ ವಿರುದ್ಧ ಕ್ರಿಮಿನಲ್ ಪ್ರಕರಣವನ್ನು ದಾಖಲು ಮಾಡಲಾಗಿದೆ. ಸದರಿ ಪ್ರಕರಣದಲ್ಲಿ ವಿಚಾರಣೆ ನಡೆದು ಅಂತಿಮ ನಾನು ನಿರ್ದೋಷಿ ಎಂದು ತೀರ್ಪು ನೀಡಲಾಗಿದೆ. ನನ್ನ ಸ್ಕೂಟರನಲ್ಲಿ ಮಗುವನ್ನು ನಮ್ಮ ಮನೆಯಿಂದ ಶಾಲೆಗೆ ಮತ್ತು ಶಾಲೆಯಿಂದ ಮನೆಗೆ ಕರೆದೊಯ್ಯಲು ಉಪಯೋಗಿಸುತ್ತೇನೆ. ಬೇರೆ ಯಾವುದೇ ಅಕ್ರಮ ವ್ಯವಹಾರಕ್ಕೆ ಉಪಯೋಗಿಸಿರುವುದಿಲ್ಲ. ಸದರಿ ಸ್ಕೂಟರಿನಲ್ಲಿ ನಾನು ಯಾವುದೇ ಸಾರಾಯಿ ಸಾಗಾಟ ಮಾಡಿರುವುದಿಲ್ಲ. ಈ ಸ್ಕೂಟರನ್ನು ನನಗೆ ಬಿಡ್ಡುಕೊಡಬೇಕೆಂದು ಪ್ರಕರಣವನ್ನು ಮುಕ್ತಾಯಗೊಳಿಸಬೇಕೆಂದು ನಾನು ಪ್ರಾರ್ಥಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ನನ್ನ ಸ್ಕೂಟರನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿಕೊಳ್ಳುವ ಮೊದಲು ಒಂದು ವರ್ಷದಿಂದಲೂ ಸ್ಕೂಟರನ್ನು ಐಸ್ ಪ್ಲಾಂಟ್‌ನಿಂದ ಶಾಲೆಗೆ ಮತ್ತು ಶಾಲೆಯಿಂದ ಐಸ್ ಪ್ಲಾಂಟಿಗೆ ನನ್ನ ಮಗುವನ್ನು ಕರೆದೊಯ್ಯಲು ಉಪಯೋಗಿಸುತ್ತಿದ್ದೆನು, ಸದರಿ ಸ್ಕೂಟರನ್ನು ನಾನು ಐಸ್ ಪ್ಲಾಂಟ್ ಪಕ್ಕದ ರಸ್ತೆಯ ಬದಿಯಲ್ಲಿ ಬಿಡುತ್ತಿದ್ದೆನು. ಅಲ್ಲಿ ಯಾವುದೇ ಶೆಡ್ಡು ಇರಲಿಲ್ಲ. ಮಳೆಗಾಲದಲ್ಲಿಯೂ ಸಹಾ ಹಾಗೆಯೇ ರಸ್ತೆ ಬದಿಯಲ್ಲಿ ಇಡುತ್ತಿದ್ದೆನು. ಸದರಿ ಸ್ಕೂಟರನ್ನು ಹ್ಯಾಂಡ್ ಲಾಕ್ ಮಾಡುತ್ತಿದ್ದೆನು. ನನ್ನ ಸ್ಕೂಟರನ್ನು ಯಾರಾದರೂ ಕಳ್ಳತನ ಮಾಡಬಹುದು ಎಂಬ ಭಯ ನನಗೆ ಇರಲಿಲ್ಲ. ನಾನು ಸ್ಕೂಟರನ್ನು ಐಸ್ ಪ್ಲಾಂಟ್ ಹತ್ತಿರ ಇರುವ ವಿಷಯ ಐಸ್ ಪ್ಲಾಂಟ್ ರವರಿಗೆ ಗೊತ್ತಿತ್ತು. ಅಬಕಾರಿ ಅಧಿಕಾರಿಗಳು ನನ್ನ ಸ್ಕೂಟರನ್ನು ಕೊಂಡೊಯ್ದ ವಿಷಯ ಯಾದವ್ ಅನ್ನುವವರು ನನಗೆ ತಿಳಿಸಿದರು. ಯಾದವ್ ಇವರು ಮನೆಯಲ್ಲಿ ಇದ್ದು, ಅವರು ಮನೆಯಲ್ಲಿ ತಮ್ಮ ಹೆಂಡತಿಯೊಂದಿಗೆ ಇರುತ್ತಾರೆ. ಅವರಿಗೆ ಮಕ್ಕಳಿಲ್ಲ. ನಾನು ಈ ಪ್ರಕರಣಕ್ಕೋಸ್ಕರ ಒಂದು ಕಟ್ಟುಕಥೆಯನ್ನು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ದಿನಾಂಕ: 10.3.2000 ರಂದು ಸಂಜೆ 5.15 ಸಮಯಕ್ಕೆ ನನ್ನ ಸ್ಕೂಟರ್‌ನಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಾಟ ಮಾಡುವ ವಿಷಯ ನನಗೆ ಮೊದಲೇ ತಿಳಿದಿತ್ತು ಎನ್ನುವುದು ಸರಿಯಲ್ಲ. ನನ್ನ ಸ್ಕೂಟರಿನಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡುವ ಕೃತ್ಯದಲ್ಲಿ ನಾನು ಭಾಗಿಯಾಗಿದ್ದೇನೆ ಎನ್ನುವುದು ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಡಿ.ಡಬ್ಲ್ಯೂ:2**

ಯಾದವ್ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 3.2.2005 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತನ್ನ ಮನೆ ಇರುವುದು ಸುಲ್ತಾನ್ ಬತ್ತೇರಿಯಲ್ಲಿ ಸುಲ್ತಾನ್ ಬತ್ತೇರಿಯ ಹತ್ತಿರ ಐಸ್ ಪ್ಲಾಂಟ್ ಇರುತ್ತದೆ. ಐಸ್ ಪ್ಲಾಂಟ್ ಹತ್ತಿರ ರಸ್ತೆ ಇದೆ. ಸದರಿ ರಸ್ತೆಯು ಬೋಳೂರಿಗೆ ಹೋಗುತ್ತದೆ. ಆ ದಾರಿಯು ನದಿ ದಡಕ್ಕೆ ಅಲ್ಲಿಂದ ಬೋಳೂರಿಗೆ ಹೋಗುತ್ತದೆ. ಬೋಳೂರಿಗೆ ಹೋಗುವಾಗ ಅದು ನದಿದಡಕ್ಕೆ ಹತ್ತಿರ ಹೋಗಿ ಮತ್ತೆ ಬೋಳೂರಿಗೆ ಹೋಗುತ್ತದೆ. ತಣ್ಣೀರುಬಾವಿಗೆ ಹೋಗುವವರು ಸುರುವಿಗೆ ನದಿದಡಕ್ಕೆ ಬಂದು ಅಲ್ಲಿಂದ ದೋಣಿ ಮುಖಾಂತರ ನದಿ ದಾಟಿ ತಣ್ಣೀರು ಬಾವಿಗೆ ಹೋಗಬೇಕು. ಸುಮಾರು ಜನ ತಣ್ಣೀರುಬಾವಿಯಲ್ಲಿ ಜೀವನ ಮಾಡುತ್ತಾರೆ. ಈ ತಣ್ಣೀರುಬಾವಿಗೆ ಹೋಗುವವರು ದೋಣಿಯಲ್ಲಿ ಹೋಗಬೇಕು. ಅಲ್ಲಿ ಡೈರೆಕ್ಟ್ ಮಾರ್ಗ ಇಲ್ಲ ನದಿದಡಕ್ಕೆ ಬಂದು ಅಲ್ಲಿಂದ ಬೋಟ್ ಮುಖಾಂತರ ತಣ್ಣೀರುಬಾವಿಗೆ ಹೋಗಬೇಕು. ಅದು ದ್ವೀಪದ ಹಾಗೆ ಐಸ್‌ಪ್ಲಾಂಟ್ ಹತ್ತಿರ ತಣ್ಣೀರುಬಾವಿಗೆ ಹೋಗುವವರು ಅಲ್ಲಿ ವಾಹನ ಇಟ್ಟು ಹೋಗುತ್ತಾರೆ. ಅಲ್ಲಿ ಯಾರೂ ಕಳ್ಳತನ ಮಾಡುವುದಿಲ್ಲ. ಏನೂ ಹೆದರಿಕೆ ಇಲ್ಲ. ವಾಹನಗಳಿಗೆ ಬೀಗ ಹಾಕಿ ಅಲ್ಲಿಯೇ ಬಿಟ್ಟು ಹೋಗುತ್ತಾರೆ. ಅವರಲ್ ಕೊಯಿಲ್ಲೊರವರು ತನಗೆ ಒಂದೂವರೆ ವರ್ಷದಿಂದ ಪರಿಚಯ ಉಂಟು. ಅವರು ಅಲ್ಲಿ ಸ್ಕೂಟರ್ ಇಟ್ಟು ಹೋಗುತ್ತಾರೆ. ಆಗಾಗಿ ಅವರ ಪರಿಚಯ ಉಂಟು, ಮಕ್ಕಳನ್ನು ಶಾಲೆಗೆ ಬಿಡುವಾಗ ದೋಣಿಯಲ್ಲಿ ಬರುತ್ತಾರೆ. ಅಲ್ಲಿಂದ ಸ್ಕೂಟರಿನಲ್ಲಿ ಮಕ್ಕಳನ್ನು ಕೊಂಡೋಗುತ್ತಾರೆ. ನಾನು ದಿನಾ ನೋಡುವುದಿಲ್ಲ. ಐಸ್ ಪ್ಲಾಂಟ್‌ನ ಹತ್ತಿರ ಬೀಗ ಹಾಕಿ ಸ್ಕೂಟರ್ ಇಟ್ಟು ಮಕ್ಕಳನ್ನು ದೋಣಿಯಲ್ಲಿ ಇರಿಸಿಕೊಂಡು ಹೋಗುತ್ತಾರೆ. ಅದು ದಿನಾರಾತ್ರಿ ಐಸ್ ಪ್ಲಾಂಟ್ ಹತ್ತಿರ ಇರುತ್ತದೆ. ಸುಮಾರು ಐದಾರು ತಿಂಗಳಿನಿಂದ ನೋಡಿದೆನು. ಎಷ್ಟು ಸಮಯ ಎಂದು ಗೊತ್ತಿಲ್ಲ. ಎಷ್ಟು ವರ್ಷ ಆಯಿತು ಕೊಂಡೋಗಿ ಎಂದು ನೆನಪಿಲ್ಲ. ಸ್ಕೂಟರ್ ಸುಮಾರು ದಿವಸದ ಹಿಂದೆ ಪೊಲೀಸ್‌ನವರು ಕೊಂಡುಹೋದರೂ. ಮಾರನೆಯ ದಿನ ಅವರಲ್ ಕೊಯಿಲ್ಲೊ ಬಂದು ನನ್ನನ್ನು ಕೇಳಿದರು. ಪೊಲೀಸರು ಕೊಂಡುಹೋದರು ಎಂದು ತಿಳಿಸಿದೆನು. ಪೊಲೀಸರು ಬಂದ ಸಮಯ ಮಧ್ಯಾಹ್ನ ಸುಮಾರು 3.30 ಗಂಟೆ ಆಗಬಹುದು.

ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ನಾನು ಮನೆ ಮನೆಗೆ ಹೋಗಿ ಇಲೆಕ್ಟ್ರೀಷಿಯನ್ ಕೆಲಸ ನಿರ್ವಹಿಸುತ್ತೇನೆ. ದಿನಾಲೂ ಹೋಗುವುದಿಲ್ಲ. ಒಮ್ಮೊಮ್ಮೆ ಮಾತ್ರ ಇರುತ್ತದೆ. ನಾನು ಕೆಲಸಕ್ಕೆ ಹೋಗುವ ಸಮಯ ನಿರ್ದಿಷ್ಟವಾಗಿರುವುದಿಲ್ಲ ಐಸ್ ಪ್ಲಾಂಟ್ ಹತ್ತಿರ ಇತರ ಜನರು ಕೂಡಾ ತಮ್ಮ ವಾಹನಗಳನ್ನು ಇಡುತ್ತಿದ್ದರು. ಸದರಿ ವಾಹನಗಳನ್ನು ಕಂಪೌಂಡ್‌ನ ಒಳಗಡೆ ಇಡುತ್ತಿದ್ದರು. ಕಾಂಪೌಂಡ್‌ನ ಹೊರಗಡೆ ಸಹಾ ಇಡುತ್ತಿದ್ದರು. ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ.

ಈ ಮೇಲಿನ ಎಲ್ಲಾ ಸಾಕ್ಷ್ಯಾಧಾರ ಹೇಳಿಕೆಗಳಿಂದ ಜಪ್ತುಪಡಿಸಲಾದ ವಾಹನವು ವಾಹನ ಮಾಲೀಕರಿಗೆ ತಿಳಿಯದೇ ಕಳ್ಳಭಟ್ಟಿ ಸಾರಾಯಿಯು ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುವುದು ಸಾಬೀತಾಗಿಲ್ಲ. ಆದುದರಿಂದ ವಾಹನ ಮಾಲೀಕರ ತಿಳುವಳಿಕೆಯಿಂದಲೇ ಈ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಆಗಿದೆ ಎಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ.

ಈ ಮೇಲಿನ ಕಾರಣಗಳಿಂದ ವಾಹನ ಮಾಲೀಕರು ತನ್ನ ತಿಳುವಳಿಕೆಗೆ ಬಾರದೇ ವಾಹನವನ್ನು ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುವುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಕಾರಣಗಳಿಂದ ಪ್ರಕರಣದಲ್ಲಿ ಜಪ್ತುಪಡಿದಿದ್ದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:465:ಡಿಟಿಸಿಆರ್:1999-2000 ದಿನಾಂಕ: 19ನೇ ಮೇ 2005**

ಕಾಕಿರ್ ಅಹ್ಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ನಂ.3 ಇ.ಐ.ಬಿ., ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 26/1999-2000 ದಿನಾಂಕ: 10.3.2000 ರಲ್ಲಿ ಜಪ್ತುಪಡಿಸಿರುವ ವಾಹನ ಸ್ಕೂಟರ್ ಸಂಖ್ಯೆ: ಎಂಇಜಿ-1691ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.05.2005 ರಂದು ಉತ್ತಲೇಖನ ಕೊಟ್ಟು ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ:1 - ಶ್ರೀ ಎಂ. ಲಿಂಗಣ್ಣ ನಿವೃತ್ತ ಅಬಕಾರಿ ನಿರೀಕ್ಷಕರು.

ಪ್ರಾ.ಸಾ:2 - ಶ್ರೀ ಜಿ. ಕೆ. ಸುಬ್ರಹ್ಮಣ್ಯ ನಿವೃತ್ತ ಅಬಕಾರಿ ನಿರೀಕ್ಷಕರು.

ಪ್ರಾ.ಸಾ:3 - ಶ್ರೀ ಸಿ. ಹೆಚ್. ಗಣಪತಿ, ಅಬಕಾರಿ ರಕ್ಷಕ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು**

ನಿಶಾನೆ ಪಿ-1 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ ಹಾಗೂ ಪ್ರಥಮ ಮಾಹಿತಿ ವರದಿಯ ಪ್ರತಿ

ನಿಶಾನೆ ಪಿ-2 - ಮಹಜರಿನ ಪ್ರತಿ

ನಿಶಾನೆ ಪಿ-3 - ಜಪ್ತುಪಡಿಸಿದ ವಸ್ತುಗಳ ಬಗ್ಗೆ ಸಲ್ಲಿಸಿದ ವರದಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

1) ಡಿಡಬ್ಲ್ಯೂ-1: ಶ್ರೀ ಅವರಲ್ ಕೊಯಿಲ್ಲೊ

2) ಡಿಡಬ್ಲ್ಯೂ-2: ಯಾದವ್

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ನಿಶಾನೆ ಡಿ-1: ರಿಕ್ಷಾ ಚಾಲಕನ ಲೈಸನ್ಸು ವಾಯ ಪ್ರತಿ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಪಿ.ಆರ್.826 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಕರ್ನಾಟಕ ನೀರಾವರಿ ನಿಗಮ ನಿಯಮಿತ

## ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ ಕಚೇರಿ, ಕನೀನಿನಿ, ಘಬಕಾನಿ, ಉಪ ವಿಭಾಗ ನಂ.3, ಗೋಕಾಕ

**ಸಂಖ್ಯೆ: ಕನೀನಿನಿ: ಘಬಕಾನಿ:ಉವಿ-8:ಕಮಾಹ:ಅಡಿ:2005-06/42-52 ದಿನಾಂಕ: 9ನೇ ಮೇ 2005**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ 3ನೇ ಪ್ರಕರಣದ (ಬ) ತಂಡದ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕನೀನಿನಿ, ಘಬಕಾನಿ, ಉಪ ವಿಭಾಗ ನಂ.8, ಗೋಕಾಕ-591307 ಕಚೇರಿಯ ವಿವರಗಳ ಪ್ರಕಟಣೆ.

**1) ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ, ಘಬಕಾನಿ, ಉಪ ವಿಭಾಗ ನಂ.8, ಗೋಕಾಕ ಕಚೇರಿಯು ಗೋಕಾಕದಲ್ಲಿ ಕಾರ್ಯನಿರ್ವಹಿಸುತ್ತಿದೆ. ಶ್ರೀ ಬಿ. ವೈ. ಪವಾರ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಈ ಕಚೇರಿಯ ಕಾರ್ಯಭಾರವನ್ನು ಹೊಂದಿರುವರು ಈ ಕಚೇರಿಯಲ್ಲಿ 2 ಸಹಾಯಕ ಇಂಜಿನೀಯರ್, 1 ಕಿರಿಯ ಇಂಜಿನೀಯರ್ 3ಸಿ ವರ್ಗದ ಹುದ್ದೆಯ ಸಿಬ್ಬಂದಿಗಳು 3 ಡಿ ವರ್ಗದ ಹುದ್ದೆಯ ಸಿಬ್ಬಂದಿಗಳು ಸೂಪರನ್ಯೂಮರರಿ ಹುದ್ದೆಯಲ್ಲಿ 3 ಸಿ ವರ್ಗದ ಮತ್ತು 1ಡಿ ವರ್ಗದ ಸಿಬ್ಬಂದಿಗಳು ಸದರಿ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದು.

ಈ ಕೆಳಕಂಡ ಕಾರ್ಯಗಳು ಘಬಕಾನಿ, ಉಪ ವಿಭಾಗ ನಂ.8 ಗೋಕಾಕ ವ್ಯಾಪ್ತಿಯಲ್ಲಿ ಬರುತ್ತವೆ.

1) ಅ) ಈ ಉಪ ವಿಭಾಗಕ್ಕೆ ವಹಿಸಲಾದ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳ

1) ಘಟಪ್ರಭಾ ಬಲದಂಡೆ ಕಾಲುವೆ ಕಿಮೀ.47 ರಿಂದ 51 65 ರಿಂದ 69, 77 ರಿಂದ 78ರ ಕೆಲಸದ ನಿರ್ವಹಣೆ ಬಾಕಿ ಉಳಿದ ಕೆಲಸದ ನಿರ್ಮಾಣ ಹಾಗೂ ಹಂಚು ಕಾಲುವೆ ಮತ್ತು ಹೊಲಗಾಲುವೆ ಕೆಲಸದ ಉಸ್ತುವಾರಿ.

2) ಮಾರ್ಕಂಡೇಯ ಬಲದಂಡೆ ಕಾಲುವೆ ಕಿಮೀ. 27, 31 ರಿಂದ 41ರ ಕೆಲಸದ ನಿರ್ಮಾಣದ ಹಾಗೂ ನಿರ್ವಹಣೆ ಮತ್ತು ಹಂಚು ಕಾಲುವೆ ಸಂಖ್ಯೆ 16, 17, 18, 19 ಮತ್ತು 20ರ ನಿರ್ವಹಣೆ ಹಾಗೂ ಇದರ ಅಡಿಯಲ್ಲಿ ಬರುವ ಹೊಲಗಾಲುವೆಗಳ ನಿರ್ಮಾಣ ಹಾಗೂ ನಿರ್ವಹಣೆ.

3) ಮಾರ್ಕಂಡೇಯ ಬಲದಂಡೆ ಕಾಲುವೆ ಕಿಮಿ 33-650 ರಲ್ಲಿ ಬರುವ ಚಚಡಿ ಯಾತ ನೀರಾವರಿ ನಿರ್ಮಾಣದ ಕೆಲಸ

4) ಮೇಲಟ್ಟಿ ಗೊಡಚಿನಮಲ್ಕಿ ಏತನೀರಾವರಿ ಕೆಲಸದ ಪ್ರಾಥಮಿಕ ಹಂತದ ವರದಿ ತಯಾರಿಸಿಸಲ್ಲಿಸುವುದು.

5) ಶಿಗಿಹೊಳಿ ಮಲ್ಲಾಪೂರ, ಹತ್ತಿರ ಮಾರ್ಕಂಡೇಯ ನದಿಗೆ ನಮ್ಮೂರ ಬಾಂದಾರ ಯೋಜನೆ ಅಡಿಯಲ್ಲಿ ಬಾಂದಾರ ನಿರ್ಮಿಸುವುದು.

ಆ) ಈ ಉಪ ವಿಭಾಗಕ್ಕೆ ವಹಿಸಲಾದ ನೀರಾವರಿ ಯೋಜನೆಗಳನ್ನು ಶೀಘ್ರವಾಗಿ ಕಾರ್ಯಗತಗೊಳಿಸಲಾಗುವುದು.

ಇ) ಈ ಉಪ ವಿಭಾಗಕ್ಕೆ ವ್ಯಾಪ್ತಿಯಲ್ಲಿ ಬರುವ ಯೋಜನೆಗಳಿಗೆ ಸಂಬಂಧಿಸಿದಂತೆ ಕಾಮಗಾರಿಗಳ.

ಗುರಿ ಮತ್ತು ಸಾಧನೆ ಮಾಹಿತಿಯನ್ನು ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಸಲ್ಲಿಸುವುದು.

2) ಅಧಿಕಾರಿಗಳ ಕರ್ತವ್ಯಗಳು ಮತ್ತು ನಿರ್ವಹಿಸುತ್ತಿರುವ ವಿಷಯಗಳ ವಿವರ.

| ಅಧಿಕಾರಿಗಳ ಹೆಸರು | ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯಗಳು |
|---|---|---|
| 1) ಶ್ರೀ ಬಿ. ವೈ. ಪವಾರ | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು | ಉಪ ವಿಭಾಗದ ಎಲ್ಲಾ ರೀತಿಯ ಕಾಮಗಾರಿ ತಾಂತ್ರಿಕ ಶಾಖೆ, ಆಡಳಿತ ಶಾಖೆ ಎಲ್ಲಾ ವಿಷಯಗಳ ಕಾರ್ಯಭಾರ |

ಉಪ ವಿಭಾಗದ ಕಚೇರಿಯ ಅಧಿಕಾರಿಗಳು ಹಾಗೂ ನೌಕರರು ಕಚೇರಿಯ ಕೈಪಿಡಿ ಮತ್ತು ಕಚೇರಿ ಕಾರ್ಯವಿಧಾನದಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನದ ಅನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಿರುತ್ತಾರೆ.

2) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ರ ಪ್ರಕರಣ (2) ಖಂಡ (ಎ) (ಸಿ) ಹಾಗೂ ಪ್ರಕರಣ 7ರ ಪ್ರಕರ ಈ ಉಪ ವಿಭಾಗ ಕಚೇರಿಗೆ ಸಂಬಂಧಿಸಿ ಈ ಕೆಳಕಂಡ ಪ್ರಾಧಿಕಾರಿಗಳನ್ನು ರಚಿಸಲಾಗಿದೆ.

| | | |
|---|---|---|
| ಪ್ರಕರಣ-2 ಖಂಡ (ಸಿ) | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಕನೀನಿನಿ, ಘಬಕಾನಿ, ಉಪ ವಿಭಾಗ-8, ಗೋಕಾಕ. | ಸಾರ್ವಜನಿಕ ಪ್ರಾಧಿಕಾರ |
| ಪ್ರಕರಣ-2 ಖಂಡ (ಎ) | ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ, ಘಬಕಾನಿ, ವಿಭಾಗ ನಂ.3, ಗೋಕಾಕ. | ಸಕ್ಷಮ ಪ್ರಾಧಿಕಾರ |
| ಪ್ರಕರಣ-7 | ಅಧೀಕ್ಷಕ ಅಭಿಯಂತರು, ಕನೀನಿನಿ, ಘಬಕಾನಿ, ವೃತ್ತ ಹಿಡಕಲ್ ಡ್ಯಾಮ | ಅಪೀಲು ಪ್ರಾಧಿಕಾರ |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವರು ಮೇಲ್ಕಂಡ ಪ್ರಾಧಿಕಾರಿಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

**ಬಿ. ವೈ. ಪವಾರ**
ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಕನೀನಿನಿ,
ಘಬಕಾನಿ, ಉಪ ವಿಭಾಗ ನಂ.8, ಗೋಕಾಕ.

ಪಿ.ಆರ್.827

## KARNATAKA STATE BAR COUNCIL, OLD K.G.I.D. BLDG., BANGALORE-1
## NOTIFICATION No.2/2005 Dated: 21st April 2005

As per Rule 12 of "The Karnataka State Bar Council (Election of Chairman) Rules 1978", it is declared that the following Member of the Council has been elected to the Office of the Chairman

**CHAIRMAN**

| Sl.No. | Name of the Candidate | Address |
|---|---|---|
| | Patil Ashok Ramanagouda | C.T.S. No. 7221, Sector No. X, Anjaneyanagar, Malmaruti Extension, Belgaum Phone: Res:2454752, STD: 0831 Mobile:9448355634 |

**V. VARALAKSHMI**
Returning Officer, K.S.B.C., B'lore-1.

PD-48

## KARNATAKA STATE BAR COUNCIL, OLD K.G.I.D. BLDG., BANGALORE-1
## ELECTION NOTIFICATION No.1/2005 Dated: 3rd June 2005
### Form of Notice under Rule-4

It is hereby notified that for the purpose of preparing Final electoral Roll in accordance with Rules 2 and 3 of Chapter-I, Part III of the Rules framed by the Bar Council of India under Section 3 (4), 10B, 15 (2) (a), 49 (1) (a) and (ab) of the Advocates Act, 1961, for the next election of Members to this Council, the particulars as to any of the disqualifications as referred to in Clauses (a) to (g) of Rule 2 shall be furnished by an Advocate who has incurred them to the State Bar Council on or before 11th July, 2005

**V. VARALAKSHMI**
I/c Secretary, Karnataka State Bar Council.

Rules 1, 2 and 3 of the Chapter I, Part-III of the Rules framed by the Bar Council of India under Sections 3 (4), 10-B, 15 (2) (a) 49 (1) (a) (ab) of the Advocates Act, 1961.

1. Every Advocate Whose name is on the Electoral Roll of the State Bar Council shall be entitled to vote at an election.

2. The name of an advocate appearing in the State roll shall not be on the electoral Roll, if on information received or obtained by the State Bar Council concerned that;
   a) His name has at any time been removed;
   b) He has been suspended from practice, provided that his disqualification shall operate only for a period of five years from the date of the expiry of the period of suspension;
   c) He is an undischarged insolvent;
   d) He has been found guilty of an election offence in regard to an election to the State Council by an election Tribunal, provided however that such disqualification shall not operate beyound the election next following after such finding has been made.
   e) He is convicted by a Competent Court for an offence involving moral turpitude, provided that this disqualification shall cease to have effect after a period of two years has elapsed since his release;
   f) He is in full time service or is in such part time business or other vocation not permitted in the case of practicing advocates by the rules either of the State Council concerned or the Council;
   g) He has intimated voluntary suspension of practice and has not given intimation of resumption of practice.

3. Subject to the provisions of Ruel-2, the name of every advocate entered in the State Roll shall be entered in the electoral roll of the State Council

**V. VARALAKSHMI**
I/c Secretary,
Karnataka State Bar Council, Bangalore.

PD-49

**INTERCON ENGINEERS PRIVATE LIMITED**
**'PADMA' # 521, 46th Cross, 5th Block, Jayanagar, Bangalore-560 041**
**EXTRACT OF THE MINUTES OF EXTRA-ORDINARY GENERAL MEETING OF MEMBERS HELD AT THE REGISTERED OFFICE OF THE COMPANY ON 13th JUNE 2005 AT 2.00 P.M.**

**MEMBERS VOLUNTARY WINDING UP**

"RESOLVED THAT pursuant to Section 484 (1) (b) of the Companies Act, 1956 INTERCON ENGINEERS PRIVATE LIMITED be wound by voluntarily with the consent of all the members".

**APPOINTMENT OF LIQUIDATOR**

"RESOLVED that Sri. H.V. Gowthama, Chartered Accountants, Bangalore and Sri. M. R. Ramadas, Director of the Company be and are hereby appointed as the voluntary Liquidators of the company on a consolidated remuneration of Rs.15,000/- (Rupees Fifteen thousands only) in addition to all their liquidation expenses and that they shall exercise all or any of the powers given under Section 512 read with Section 457 of the Companies Act, 1956 to liquidator for the purpose of members voluntary winding up."

Certified True Copy
For INTERCON ENGINEERS PRIVATE LIMITED

**M. R. Ramesh**
Director/ Liquidator.

**FORM No-151**
**(See Rule 315)**
**Member's Voluntary Winding-up**
**Notice of appointment of liquidator pursuant to section 516**

| | | |
|---|---|---|
| Name of Company | : | INTERCON ENGINEERS PRIVATE LIMITED |
| Nature of Business | : | "MECHANICAL ENGINEERS & MANUFACTURERS OF MACHINERYFOR WOOD WORKING INDUSTRIES" |
| Address of Registered Office | : | 'PADMA',<br>#521, 46th Cross,<br>5th Block, Jayanagar, Bangalore-560 041 |
| Name(s) and address (es) of Liquidator (s) | : | 1. Sri. H. V. GOWTHAMA,<br>Chartered Accountants,<br># 23/57, 41st Cross, East End 'C' Main Road,<br>9th Block, Jayanagar, Bangalore -560 069 |
| | : | 2. Sri. M. R. RAMDAS,<br>'PADMA'<br>#521, 46th Cross,<br>5th Block, Jayanagar, Bangalore-560 041 |

Date of appointment : 13th June 2005
By whom appointed : Members of the Company in Extra-ordinary General Meeting.

**M. R. Ramesh**
Director/ Liquidator.

**FORM No-155**
**(See Rule 329- Companies (Court) Rules, 1959)**
**Name of the Company: INTERCON ENGINEERS PRIVATE LIMITED**
**(In Voluntary Liquidation)**
**Notice Convening Final Meeting**

Notice is hereby given in pursuance of Section 497 of the companies Act, 1956 that a General Meeting of the Members of the above named company will be held at 'PADMA', # 521, 46th Cross, 5th Block, Jayanagar, Bangalore-560 041 on Wednesday the 27th day of July 2005 at 2 'O' Clock in the afternoon for the purpose of having an account laid before them showing the manner in which the winding up has been conducted and the property of the Company disposed of and of hearing any explanation that may be given by the Liquidator and also of determining by a special resolution of the Company the manner in which the books, accounts and documents of the Company and of the liquidator shall be disposed of.

**M. R. Ramesh**
PD-50 Director/ Liquidator.

**IN THE COURT OF COMMISSIONER FOR**
**WORKMEN'S COMPENSATION BIDAR.**
**No. LOB/WCA/Cr-20/2005**

**Applicants:** **V/s** **Respondents:**

1. Seridevi W/o Raja
Age 22 years Occ: Household
R/o Pandariga Taluk: Humnabad Dist
Bidar and 4 Others.

Respondents:
1. M/s Bajwa Roadways, Bangalore.
2. Oriental Issurance co., Ltd., Bangalore

**PROCLAMATION**

Sri/Smt Seridevi W/o F/o S/o Raju R/o Pandariga Taluk: Humnabad Dist Bidar have has filed application in this Court Claiming compensation stating that late Raju was working as Driver under the Respondet No.I he met with an accident arising out of and during the course of employment as a result he died on 21.12.2004.

Wherefore, it is hereby notified for the information of these concerned that other dependents if any may file their claim aplication and objections within 30 days from the date of publication of this proclaimation, if no applications of objections are received within the specified date the court will proceeded further in the matter.

Commissioner For workmen's
PR-815 Compensation, Bidar.

**IN THE COURT OF COMMISSIONER FOR**
**WORKMEN'S COMPENSATION BIDAR.**
**No. LOB/WCA/Cr-19/2005**

**Applicants:** **V/s** **Respondents:**

1. Basavaraj S/o Veerashetty Mahajan
Age 50 years Occ: Nil Chitguppa Tq:
Humnabad, Dist Bidar & 30 thers.

Respondents:
1. M/s Bajwa Road lines 13/8 Ist Floor
S.V.Nilaya' K.P.N. Extension, Bangalore
2. Orienbal Insurance Co. Ltd., Bangalore

**PROCLAIMATION**

Sri/Smt Basavaraj W/o F/o S/o RaviKumar R/o Chitguppa Taluk: Humnabad Dist Bidar have has filed application in this Court Claiming compensation stating that late Ravikumar was working as Driver under the Respondet No.I he met with an accident arising out of and during the course of employment as a result he died on 21.12.2004.

Wherefore, it is hereby notified for the information of these concerned that other dependents if any may file their claim aplication and objections within 30 days from the date of publication of this proclaimation, if no applications of objections are received within the specified date the court will proceeded further in the matter.

Commissioner For workmen's
PR-824 Compensation, Bidar.